# ಸಿದ್ಧಗಂಗಾ



ಜನವರಿ, 1977



॥ ಶ್ರೀ ಗುರುಸಿದ್ಧಲಿಂಗ ಪ್ರಸನ್ನ ॥



ಅಧ್ಯಾತ್ಮ ಸ್ವರೂಪಾಯ ಶಿವಜ್ಞಾನಪ್ರದಾಯಿನೇ ।
ನಮಸ್ಸದ್ಗುರು ನಾಥಾಯ ಷಟ್ಸ್ಥಲ ಬ್ರಹ್ಮಮೂರ್ತಯೇ ॥

# ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ರಥೋತ್ಸವಾಹ್ವಾನ ಪತ್ರಿಕಾ

## ಶ್ರೀ ಸಿದ್ಧಗಂಗಾ ಕ್ಷೇತ್ರಾಧ್ಯಕ್ಷ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳು

ಶ್ರೀ.................................................................................................................................................

ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕ ೧೮೯೮ಕ್ಕೆ ಸರಿಯಾದ ಶ್ರೀ ನಳನಾಮ ಸಂವತ್ಸರದ

| | | | | |
|---|---|---|---|---|
| ಮಾಘ ಬಹುಳ | ೯ | ಶನಿವಾರ | 12–2–77 | ಸ್ವಸ್ತಿವಾಚನಾದಿಗಳು ಮತ್ತು ಧ್ವಜಾರೋಹಣಾದಿ ಕಾರ್ಯಗಳು |
| ,, ,, | ೧೦ | ಭಾನುವಾರ | 13–2–77 | ವೃಷಭವಾಹನ ಮತ್ತು ಸಿಂಹವಾಹನ |
| ,, ,, | ೧೧ | ಸೋಮವಾರ | 14–2–77 | ಹುಲಿವಾಹನ ಮತ್ತು ರಾವಣವಾಹನ |
| ,, ,, | ೧೨ | ಮಂಗಳವಾರ | 15–2–77 | ಗಜವಾಹನ ಮತ್ತು ನಂದಿವಾಹನ |
| ,, ,, | ೧೩ | ಬುಧವಾರ | 16–2–77 | ಮಹಾಶಿವರಾತ್ರಿ ಪೂಜಾದಿಗಳು, ಮುತ್ತಿನ ಪಾಲಕಿಉತ್ಸವ ಮತ್ತು ನವಿಲುವಾಹನ |
| ,, ,, | ೧೪ | ಗುರುವಾರ | **17-2-77** | **ರಥೋತ್ಸವ** ಮತ್ತು ರುದ್ರಾಕ್ಷಿಮಂಟಪೋತ್ಸವ |
| ,, ,, | ೩೦ | ಶುಕ್ರವಾರ | **18-2-77** | **ಬೆಳ್ಳಿಪಾಲಕಿಉತ್ಸವ** ಮತ್ತು ನವರಂಗಪಾಲಕಿಉತ್ಸವ |
| ಫಾಲ್ಗುಣ ಶುದ್ಧ | ೧ | ಶನಿವಾರ | 19–2–77 | ಬಿಲ್ವವೃಕ್ಷವಾಹನ ಮತ್ತು ಅಶ್ವವಾಹನ |
| ,, ,, | ೨ | ಭಾನುವಾರ | **20-2-77** | ಹುತ್ತದವಾಹನ ಮತ್ತು **ತೆಪ್ಪೋತ್ಸವ** |
| ,, ,, | ೩ | ಸೋಮವಾರ | 21–2–77 | ಶೇಷವಾಹನ ಮತ್ತು ಪಂಚಬ್ರಹ್ಮೋತ್ಸವ |

ಮತ್ತು ವಾಡಿಕೆಯಂತೆ ಎತ್ತಿನ ಪರಿಷೆಯೂ, 18–2–77 ರ ಶುಕ್ರವಾರ "ದನಗಳ ಪ್ರದರ್ಶನವೂ" ಉತ್ತಮ ರಾಸುಗಳಿಗೆ ಬಹುಮಾನ ವಿತರಣೆಯೂ ನಡೆಯುವಂತೆ ಏರ್ಪಡಿಸಿದೆ. "ವ್ಯವಸಾಯ ಮತ್ತು ಕೈಗಾರಿಕಾ ವಸ್ತುಪ್ರದರ್ಶನವೂ" ಮತ್ತು ಪ್ರತಿದಿನವೂ ಸಾಯಂಕಾಲ ಸಾಂಸ್ಕೃತಿಕ ಚಟುವಟಿಕೆಗಳು ನಡೆಯುವಂತೆ ಏರ್ಪಾಟು ಮಾಡಲಾಗಿದೆ.

ಸರ್ವರೂ ಸಕಾಲದಲ್ಲಿ ಬಂದು ಉತ್ಸವಗಳಲ್ಲಿ ಭಾಗವಹಿಸಿ ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಕೃಪೆಗೆ ಪಾತ್ರರಾಗಬೇಕಾಗಿ ಅಪೇಕ್ಷಿಸುತ್ತೇವೆ.

ಶ್ರೀ ಸಿದ್ಧಗಂಗಾ ಕ್ಷೇತ್ರ
ತುಮಕೂರು ಜಿಲ್ಲೆ

ಶ್ರೀ ಶ್ರೀ ಸ್ವಾಮಿಗಳು



# ಶ್ರೀವಾಣಿ

ಮನುಷ್ಯನ ಮನಸ್ಸು ಸದಾ ಸವಿಷಯಕ, ನಿರ್ವಿಷಯಕವಲ್ಲ. ಅಂದರೆ ಮನುಷ್ಯನ ಮನಸ್ಸು ಯಾವಾಗಲೂ ಒಂದಲ್ಲ ಒಂದು ವಿಷಯವನ್ನು ಚಿಂತನೆ ಮಾಡುತ್ತಲೇ ಇರುತ್ತದೆ; ಒಂದು ಕ್ಷಣವೂ ಶಾಂತವಾಗಿರುವುದಿಲ್ಲ. ಹತ್ತು ದಿಕ್ಕಿಗೆ ಹರಿಯುವ ಮನಸ್ಸನ್ನು ವಿವೇಕದಿಂದ ಸದ್ವಿಚಾರ ಚಿಂತನೆಯ ಕಡೆ ಹರಿಯುವಂತೆ ಮಾಡಬೇಕು. ಮೊದಲು ಮನಸ್ಸನ್ನು ಗೆದ್ದರೆ ಅನಂತರ ಮಂದಿಯನ್ನು ಗೆಲ್ಲಬಹುದು. ಮನಸ್ಸು ಸಂಯಮಗೊಂಡಾಗ ಅದು ಸೂಕ್ಷ್ಮಗ್ರಾಹಿಯಾಗಬಲ್ಲದು. ಆಗ ಅಗೋಚರ ವಸ್ತುಗಳೂ ಗೋಚರಿಸುತ್ತವೆ. ಇಂದ್ರಿಯ ನಿಗ್ರಹ ಶಕ್ತಿಯು ಯೋಗಸಾಧನೆಯಿಂದ ಹೆಚ್ಚುತ್ತದೆ, ಅಪರಿಮಿತವಾಗುತ್ತದೆ.

ಶುದ್ಧ ಮನಸ್ಸಿನ ಸಂಪಾದನೆ ಹೇಗೆ? ಇದು ಸಾಹಸದ ಕಾರ್ಯ. ಸಾಮಾನ್ಯ ಅಂತಸ್ತಿಗೆ ಮೀರಿದುದು. ದೊಡ್ಡ ಸಾಧಕರಿಗೆ ಮಾತ್ರ ಶಕ್ಯವಾದುದು. ಆದರೆ ಯಾರೂ ನಿರಾಶರಾಗಬೇಕಾದುದಿಲ್ಲ. ಸ್ವಪ್ರಯತ್ನದ ಸಾಧನೆಯಿಂದ ಶುದ್ಧ ಮನಸ್ಸನ್ನು ಹೊಂದುವುದು ಸಾಧ್ಯ. ಹಾಗಾದರೆ ಅಂಥ ಸಾಧನೆ ಯಾವುದು? ಅದರ ವಸ್ತು, ಗುರಿ, ಹಾದಿ ಯಾವುದು? ಮನಸ್ಸಿನ ಶುದ್ಧಿ ಮನಸ್ಸಿನಿಂದಲೇ ಸಾಧ್ಯ. ಮನಸ್ಸೇ ಅದರ ಸಾಧನೆಯ ವಸ್ತು, ಹಾದಿ, ಗುರಿ. ಉಷ್ಣ ಉಷ್ಣದಿಂದಲೇ ಶಮನಗೊಳ್ಳುವಂತೆ ಶೀತ ಶೀತದಿಂದಲೇ ಶಮನಗೊಳ್ಳುವಂತೆ ಮನಸ್ಸು ಮನಸ್ಸಿನಿಂದಲೇ ಹಾದಿಗೆ ಬರುವುದು.

ಅಲ್ಪವಾದ ಫಲಾಪೇಕ್ಷೆಗೆ ಅಪಾರ ಶ್ರಮ ಅಗತ್ಯವೆನಿಸುವುದಾದರೆ ಪರಮಾತ್ಮನನ್ನು ಪಡೆಯಬೇಕೆನ್ನುವ ಅತ್ಯಮೂಲ್ಯ ಫಲಾಪೇಕ್ಷೆಯುಳ್ಳವನು ಎಷ್ಟು ಸಾಧನೆ ಮಾಡಿದರೂ ಅದು ಅಲ್ಪವೇ ಆಗುತ್ತದೆ.

ಮನುಷ್ಯ ಸದಾತನ್ನನ್ನು ತಾನು ವಿಮರ್ಶಿಸಿಕೊಳ್ಳುತ್ತಿರಬೇಕು. ಯಾವಾಗ ಮನುಷ್ಯ ತನ್ನನ್ನು ತಾನು ಸುಧಾರಿಸಿಕೊಳ್ಳುವನೋ ಆಗ ಮಾತ್ರ ತಾನು ಯೋಗ್ಯವಾಗಿ ಬಾಳಿ ಜಗತ್ತಿನಲ್ಲಿ ಪ್ರೇಮದ ಬಾಳನ್ನು ಬಾಳುವುದು ಸಾಧ್ಯವಾಗುವುದು.

# ‘ಸಿದ್ಧಗಂಗಾ’

ಜನವರಿ, ೧೯೭೭

ಸಂಪುಟ–೧೩ ಸಂಚಿಕೆ–೧

ಪ್ರಕಾಶಕರು
ಹೆಚ್. ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿ ಸಂಘದ ಪರವಾಗಿ

ಸಂಪಾದಕರು
ಪಂ|| ಚನ್ನಪ್ಪ ಎರೇಸೀಮೆ
ಕೆ. ಜಿ. ರಂಗಯ್ಯ

ಜಾಹೀರಾತು ವ್ಯವಸ್ಥಾಪಕರು
ಎಂ. ರೇಣುಕಾರಾಧ್ಯ

ಮುದ್ರಕರು
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ

ಪ್ರಕಟನೆಯ ಸ್ಥಳ
ಶ್ರೀ ಸಿದ್ಧಗಂಗಾ ಕ್ಷೇತ್ರ

ಚಂದಾ ವಿವರ

ವಾರ್ಷಿಕ ಚಂದಾ: 10 ರೂ
ಅಜೀವ ಸದಸ್ಯತ್ವ: 101 ರೂ


## ಈ ಸಂಚಿಕೆಯಲ್ಲಿ



### ಮುಖ ಪುಟ

‘ದೇಹಕ್ಕೆ ಆಹಾರ ಹೇಗೋ ಮನಸ್ಸಿಗೆ ಪ್ರಾರ್ಥನೆ ಹಾಗೆ’ ಎಂದಿದ್ದಾರೆ ಬಾಪೂಜಿ. ಅದರಂತೆ ಶ್ರೀ ಶ್ರೀ ಗಳವರ ಸನ್ನಿಧಿಯಲ್ಲಿ ವಿದ್ಯಾರ್ಥಿಗಳ ಸಾಮೂಹಿಕ ಪ್ರಾರ್ಥನೆ ಶ್ರೀ ಕ್ಷೇತ್ರದ ನಿತ್ಯನೇಮ.

## ಲೇಖಕರಲ್ಲಿ ಮನವಿ

‘ಸಿದ್ಧಗಂಗಾ’ ಲೇಖಕರಿಂದ ಧಾರ್ಮಿಕ, ಸಾಂಸ್ಕೃತಿಕ ಐತಿಹಾಸಿಕ ಹಾಗೂ ವೈಚಾರಿಕ ಲೇಖನಗಳು ಸಣ್ಣಕಥೆ, ಕವನ, ಪ್ರಬಂಧ ಇವುಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಫೂಲ್‌ಸ್ಕೇಪ್ ಸೈಜಿನ 3 ಪುಟಗಳಿಗೆ ಮೀರದಂತಿದ್ದು ಕಾಗದದ ಒಂದೇ ಮಗ್ಗುಲಲ್ಲಿ ಬರೆಯಲ್ಪಟ್ಟಿರಬೇಕು. ಅಸ್ವೀಕೃತ ಲೇಖನಗಳನ್ನು ಹಿಂದಿರುಗಿಸಲಾಗುವುದಿಲ್ಲ. ಸ್ವೀಕೃತ ಲೇಖನಗಳಿಗೆ ‘ಸಿದ್ಧಗಂಗಾ’ ಆಗ್ಗಿಂದಾಗ್ಗೆ ಸಿಗದಿಪಡಿಸಿಕೊಳ್ಳುವ ಸಂಭಾವನೆಯನ್ನು ನೀಡಲಾಗುವುದು. ಲೇಖನಗಳನ್ನು

“ಸಂಪಾದಕರು”
‘ಸಿದ್ಧಗಂಗಾ’ [ಕನ್ನಡ ಮಾಸ ಪತ್ರಿಕೆ]
ಶ್ರೀ ಸಿದ್ಧಗಂಗಾ ಕ್ಷೇತ್ರ –572131 ತುಮಕೂರು ಜಿಲ್ಲೆ.
ಇವರಿಗೆ ಕಳಿಸಿ ಕೊಡಬೇಕಾಗಿ ಪ್ರಾರ್ಥನೆ.

## ಚಂದಾದಾರರಲ್ಲಿ ಮನವಿ

‘ಸಿದ್ಧಗಂಗಾ’ ಹದಿಮೂರನೇ ವರ್ಷಕ್ಕೆ ಪಾದಾರ್ಪಣೆ ಮಾಡಿರುವ ಈ ಶುಭ ಸಂದರ್ಭದಲ್ಲಿ ಮಾನ್ಯ ಓದುಗರನ್ನು ಹೃತ್ಪೂರ್ವಕವಾಗಿ ವಂದಿಸುತ್ತೇವೆ.

ನಿಮ್ಮ ಚಂದಾ ಅವಧಿ ಮುಗಿಯುವವರೆಗೆ ವಿಳಾಸ ಬದಲಾವಣೆ ಮತ್ತು ಇತರೆ ಬಗ್ಗೆ ವ್ಯವಹರಿಸುವಾಗ ವಿಳಾಸದ ಹಿಂಬದಿ ಇರುವ ಕ್ರಮಾಂಕ ಅಥವಾ ಯಾರ ಮೂಲಕ ಸದಸ್ಯತ್ವ ಪಡೆದಿರುವಿರೋ ಆ ನಮ್ಮ ಪ್ರತಿನಿಧಿಗಳ ಹೆಸರನ್ನು ಸೂಚಿಸಿ ಪತ್ರ ಬರೆಯಿರಿ.

ಚಂದಾ ಅವಧಿ ಮುಗಿದಿರುವ ಮಾನ್ಯ ಓದುಗರು ನೂತನ ಸಾಲಿಗೆ ಮುಂದುವರಿಸಿಕೊಳ್ಳಬೇಕಾಗಿ ವಿನಂತಿ.

ಚಂದಾ ಬಾಕಿ ಇರುವವರು ಸಂದಾಯ ಮಾಡಿ ‘ಸಿದ್ಧಗಂಗಾ’ ಮುನ್ನಡೆಗೆ ಸಹಕರಿಸಿ.

ಪ್ರಕಾಶಕರು
‘ಸಿದ್ಧಗಂಗಾ’ ಮಾಸ ಪತ್ರಿಕೆ ಸಿದ್ಧಗಂಗಾಮಠ–572131 ತುಮಕೂರು ಜಿಲ್ಲೆ

# ನವನೀತ

(ಸಂಸ್ಕೃತ ಶ್ಲೋಕಗಳ ಭಾವಾನುವಾದ)

**ದುರ್ಜನೇನ ಸಮಂ ಸಖ್ಯಂ**
**ಪ್ರೀತಿಂ ಚಾಪಿ ನ ಕಾರಯೇತ್ ।**
**ಉಷ್ಣೋ ದಹತಿ ಚಾಂಗಾರಃ ಶೀತಃ**
**ಕೃಷ್ಣಾಯತೇ ಕರಮ್ ॥**

ಎಂದೆಂದಿಗೂ ಬೇಡ ದುರ್ಜನನ ಸಂಗ
ಪ್ರೀತಿಸಿದೊಡವನಿಂದ ಒದಗುವುದು ಭಂಗ ।
ಕೆಂಡ ಸುಡುವುದು ಕೈಯನುರಿಯುತಿರಲು
ನಂದಿತೆನೆ ಮಸಿ ಬಳಿವುದದೆ ಇದ್ದಿಲು ॥

❀

**ದುರ್ಜನಃ ಪರಿಹರ್ತವ್ಯೋ ವಿದ್ಯ**
**ಯಾಽಲಂಕೃತೋಽಪಿ ಸನ್ ।**
**ಮಣಿನಾ ಭೂಷಿತಃ ಸರ್ಪಃ ಕಿಮಸೌ**
**ನ ಭಯಂಕರಃ ? ॥**

ದೂರವಿಡು ದುಷ್ಟನನು ಕೂಡದಿರು ಒಳಗೆ
ಕಲಿತವನೇ ಆದರೂ ನೀಡದಿರು ಸಲುಗೆ ।
ಹೆಡೆಯೊಳಗೆ ಮಣಿಯಿರುವುದೆಂದು ತಿಳಿದು
ಎನಿಸುವರೆ ಫಣಿಯನ್ನು ಸೌಮ್ಯನೆಂದು? ॥

❀

**ಸರ್ಪಃ ಕ್ರೂರಃ ಖಲಃ ಕ್ರೂರಃ**
**ಸರ್ಪಾತ್ ಕ್ರೂರತರಃ ಖಲಃ ।**
**ಮಂತ್ರೌಷಧಿವಶಃ ಸರ್ಪಃ ಖಲಃ**
**ಕೇನ ನಿವಾರ್ಯತೇ ? ॥**

ಸರ್ಪವಾದರೂ ಕ್ರೂರಿ ದುರ್ಜನನು ಕೂಡ
ಸರ್ಪಕಿಂತಲು ಕ್ರೂರಿ ದುರ್ಜನನು ನೋಡಾ ।
ಮದ್ದು-ಮಂತ್ರಕೆ ವಶವು ಜಂತು-ವಿಷವು
ಎಂತು ಪರಿವುದೊ ಕಾಣೆ ದುಷ್ಟ-ವಿಷವು! ॥

— ಕಾವ್ಯಸುಧಾಪ್ರಿಯ.

# ಅಮೃತ ಬಿಂದು

‘ಅರಿತು ಆಡಿದರೆ ಮಾತೇ ಮುತ್ತು; ಅಲ್ಲದೊಡೆ ಅದೇ ಮೃತ್ಯು’ ಎಂದಿದ್ದಾರೆ ಅರಿತವರು. ಮುಂಜಾನೆಯಿಂದ ಸಂಜೆಯವರೆಗೆ ಮನುಷ್ಯನಾದವನು ಎಷ್ಟೋ ಮಾತುಗಳನ್ನು ಆಡಬೇಕಾಗುತ್ತದೆ. ಪ್ರತಿ ಮಾತನ್ನೂ ಅರಿತು ಆಡಿದರೆ ಅದರಿಂದ ಅವನಿಗೆ ಬೆಲೆ ಬರುತ್ತದೆ; ಎಚ್ಚರ ತಪ್ಪಿ ಆಡಿದರೆ ಅನರ್ಥ ಸಂಭವಿಸುತ್ತದೆ. ಮೃದು ಮಾತುಗಳಿಂದ ಸರ್ವಜಂತುಗಳೂ ಸಂತುಷ್ಟವಾಗುತ್ತವೆಯೆಂದ ಮೇಲೆ ಅವನ್ನೇ ಆಡಿ ಅನ್ಯರನ್ನೂ ಒಲಿಸಿ ತಾನೂ ಸುಖಪಡಲು ಅಡ್ಡಿಯೇನಿದೆ? ‘ನುಡಿದರೆ ಮುತ್ತಿನ ಹಾರದಂತಿರಬೇಕು..................ಲಿಂಗ ಮೆಚ್ಚಿ ಅಹುದಹುದೆನಬೇಕು’ ಎಂದು ಅನುಭಾವಿಗಳು ಹೇಳಿರುವುದು ಸೂಕ್ತವೇ ಆಗಿದೆ. ಕೆಲಸಕ್ಕೆ ಬಾರದ ಗೊಡ್ಡು ಹರಟೆ ಮಾತು ಎನಿಸಿಕೊಳ್ಳಲಾರದು. ಅದಕ್ಕೆಂದೇ ಹಿರಿಯರು ‘ಮಾತು ಮನೆ ಕೆಡಿಸಿತು, ತೂತು ಒಲೆ ಕೆಡಿಸಿತು’ ಎಂದಿದ್ದಾರೆ. ಮಾತು ಕೇವಲ ಮಾತಾಗಿಯೇ ಉಳಿಯದೆ ಕೃತಿರೂಪ ತಳೆಯಲು ಅವಕಾಶ ನೀಡುವಂತಿದ್ದರೆ ಆಗ ಅದಕ್ಕೆ ಮತಷ್ಟು ಮೆರುಗು ಬರುತ್ತದೆ. ‘ಕಾಲ ಹೋಗುತ್ತದೆ ಮಾತು ನಿಲ್ಲುತ್ತದೆ’ ‘ಮಾತು ಬಲ್ಲವಗೆ ಜಗಳವಿಲ್ಲ’ ಈ ಸೂಕ್ತಿಗಳು ಮಾತಿನ ಮಹತ್ವವನ್ನು ಎತ್ತಿ ಹಿಡಿಯುತ್ತವೆ. ಅನ್ಯರಿಗೆ ನೋವುಂಟು ಮಾಡುವಂತಹ, ಅಪ್ರಿಯವಲ್ಲದ, ಅಸತ್ಯವಲ್ಲದ, ಅರ್ಥಪೂರ್ಣವಾದ, ಫಲನೀಡುವಂತಹ ಮಾತು ಮಾನವನನ್ನು ದೇವತ್ವಕ್ಕೇರಿಸಬಲ್ಲ ಒಂದು ಮಾಧ್ಯಮ.

‘ಮಧು ತಿಷ್ಠತಿ ಜಿಹ್ವಾಗ್ರೇ ಹೃದಿ ಹಾಲಾಹಲಮೇವ ಕೇವಲಮ್’ ಎಂಬಂತೆ ನಟನೆಗೆ ನಯವಾದ ನುಡಿಗಳನ್ನೇ ನಾಲಿಗೆಯಿಂದುಸುರಿ ಹೃದಯದಲ್ಲಿ ಹಾಲಾಹಲವನ್ನು ತುಂಬಿಕೊಂಡವನ ಮಾತು ಮಾಣಿಕ್ಯವೆನಿಸಲಾರದು. ಅದು ಕೇವಲ ಗೋಮುಖವ್ಯಾಘ್ರತ್ವದ ದ್ಯೋತಕ. ಅಂಥವರ ಮಾತು, ಇದ್ದದ್ದನ್ನು ಇದ್ದಂತೆ ಕಟುವಾಗಿ ಆಡುವವನ ಮಾತಿಗಿಂತಲೂ ಹೆಚ್ಚು ಹಾನಿಕಾರಕ. ‘ಮೃದು ವಚನಂಗಳಿಂದಧಿಕ ಜಪತಪಗಳಿಲ್ಲ’ ನಿಜ.

ನಮ್ಮ ನಡೆ ನುಡಿಯನ್ನು ಅನುಸರಿಸಿ ಸಾಗಬೇಕು. ನಡೆಯಲಾಗದ್ದನ್ನು ನುಡಿದರೆ ಅದರ ಬೆಲೆ ಕಡಿಮೆಯಾಗುತ್ತದೆ. ನಡೆಯುವವನು ಎಡಹುತ್ತಾನೆ; ಅಂತೆಯೇ ನುಡಿಯುವವನೂ ಎಡಹುವುದು ಸಹಜ. ಆದರೆ ಮಿತಭಾಷಿಗೆ ಎಡಹುವ ಸಂದರ್ಭಗಳೂ ಮಿತವೇ. ಅದಕ್ಕಂತಲೇ ‘ಮಾತು ಬೆಳ್ಳಿಯಾದರೆ ಮೌನ ಬಂಗಾರ’ವೆನಿಸುವುದು. ಮಾತು ಮಾಡಲಾಗದ್ದನ್ನು ಎಷ್ಟೋ ಸಂದರ್ಭಗಳಲ್ಲಿ ಮೌನ ಮಾಡಿದೆಯೆಂಬುದು ಅಚ್ಚರಿಯೇನಲ್ಲ. ಅಂತೆಯೇ ಶುಷ್ಕ ಹರಟೆಯನ್ನು ತೊರೆದು ಸೃಜನಶೀಲ ವಿಚಾರಪೂರಿತ ಮಾತುಗಳನ್ನು ಆಡಬೇಕು; ಇಲ್ಲವಾದರೆ ಮೌನದಿಂದಿರುವುದೇ ಲೇಸು. — ‘ದುಂಬಿ’

# ಅತಿಥಿ

"ಸುಸ್ವಾಗತ ! ಶುಚಿ, ರುಚಿ, ರಸವತ್ತಾದ ಊಟ. ಬೊಂಬಾಯಿ ಊಟ ಐದು ರೂಪಾಯಿ, ಮದರಾಸು ಊಟ ನಾಲ್ಕು ರೂಪಾಯಿ ಮೈಸೂರು ಊಟ ಮೂರು ರೂಪಾಯಿ..........."

ಬಗೆ ಬಗೆಯಾದ ತಿಂಡಿಗಳು, ಭಕ್ಷ್ಯಗಳು, ಜಲೇಬಿ, ಲಾಡು, ಜಾಮೂನು, ಹಲ್ವ, ಪೂರಿ....'

"ನಿಮಗೇನು ಬೇಕು ? ಏನನ್ನು ತಂದು ಕೊಡಲಿ?" ಆದರವೋ, ಆಸ್ಥೆಯೋ, ಕರ್ತವ್ಯಧರ್ಮವೋ ಕಂಡು ಬರುವಂತಹ ಪ್ರಶ್ನೆ.

"ಹಣ ಹೋದರೆ ಹೋಯಿತು. ತುಂಬ ರುಚಿಯಾಗಿರುತ್ತದೆ ಊಟ ! ಕೇಳದ ಕೂಡಲೇ ತಡವಿಲ್ಲದೆ ಸಪ್ಲೈ ಮಾಡುತ್ತಾರೆ. ತುಂಬಾ ಹೆಸರಾದ ಹೋಟೆಲು. ಇಲ್ಲೇ ತಿಂದು ನೋಡಿ ಮಸಾಲೆ ದೋಸೆ ! "

— ಹಳ್ಳಿಗಳಿಗೂ ಹೋಟೆಲುಗಳು ಈಗ ಪರಿಚಿತ. ಅನಿವಾರ್ಯವಾಗಿ ಕೆಲವರಿಗಂತೂ ಹೋಟೆಲು ಮಾಣಿಗಳೇ ಅನ್ನದಾತರು. ಕೆಲವರಿಗೆ ಮನೆಯ ಊಟಕ್ಕಿಂತ ಹೋಟೆಲಿನ ತಿಂಡಿಯೇ ರುಚಿ. ಶ್ರೀಕೃಷ್ಣನು ಪಾಂಡವರ ಕಡೆಯಿಂದ ರಾಯಭಾರಿಯಾಗಿ ಹಸ್ತಿನಾಪುರಕ್ಕೆ ಬಂದಾಗ, ಆ ದಿನ ದುರ್ಯೋಧನನು ಷಡ್ರಸೋಪೇತವಾದ ಬಗೆ ಬಗೆಯ ಭಕ್ಷ್ಯಭೋಜ್ಯಗಳನ್ನು ಮಾಡಿಸಿ ಕಾದಿದ್ದನಂತೆ. ಅಷ್ಟು ಬಗೆಯ ಅಷ್ಟು ರುಚಿಯಾದ ಭಕ್ಷ್ಯಾದಿಗಳನ್ನು ಅರಮನೆಯವರು ಮತ್ತೆಂದಾದರೂ ಮಾಡಿಸಿದ್ದರೋ ಇಲ್ಲವೊ! ಹೋಟೆಲುಗಳಲ್ಲಿ ಮಾತ್ರ ನಿತ್ಯವೂ ಉಂಟು. ಮನೆಗಳಲ್ಲಿ ನಿತ್ಯವೂ ಹಾಗೆ ಮಾಡುವುದು ಸಾಮಾನ್ಯರಿಗೆ ಸಾಧ್ಯವಿಲ್ಲ. ಮಾಡಿದರೆ ಕೆಲವೇ ದಿನಗಳಲ್ಲಿ ಮನೆ ದಿವಾಳಿ ಎದ್ದು ಹೋದೀತು.

ಹೋಟೆಲು ಅಥವಾ ಉಪಾಹಾರ ಮಂದಿರ ಇಲ್ಲವೇ ಭೋಜನಶಾಲೆಗಳು ಆತಿಥ್ಯಕ್ಕೆ ಹೊಸತಾದವೆಂಬುದು ತಾತ್ಪರ್ಯ. ಅಷ್ಟೇ ಅಲ್ಲ, ಅನ್ನದ ಪ್ರಭಾವವನ್ನು ಕುರಿತು ಯೋಚಿಸಬೇಕಾದ ಅಗತ್ಯವೂ ಇದೆ. 'ಅನ್ನಂಬ್ರಹ್ಮ' ಎನ್ನುತ್ತದೆ ಶ್ರುತಿ. 'ಇನ್ನು ಅನ್ನದೇವರ ಮುಂದೆ ದೇವರು ಇಲ್ಲ-ಎಂದನು ಸರ್ವಜ್ಞ ಕವಿ. 'ಆದರವಿಲ್ಲದ ಅಮೃತಾನ್ನವೇಕೆ ? ಎಂದು ವ್ಯವಹಾರ ಮತ್ತು ಧರ್ಮವನ್ನು ಸಾರಿದ್ದಾರೆ ಪುರಂದರದಾಸರು.

ಅನ್ನದ ಪ್ರಭಾವ:

"ಅತಿಥಿ ದೇವೋ ಭವ- ಅತಿಥಿಯನ್ನು ದೇವರೆಂದು ತಿಳಿ" ಎಂದು ವೇದಗಳ ಉಪದೇಶ. ಅತಿಥಿಯನ್ನು ಹೇಗೆ ಉಪಚರಿಸಬೇಕು, ಎಂತಹ ಆಹಾರವನ್ನು ನೀಡಬೇಕು - ಮುಂತಾದ ವಿವರಗಳನ್ನು ಹೇಳಲಾಗಿದೆ. ಇದು ಶುಷ್ಕವಾದ ಆಚಾರ ಧರ್ಮವಲ್ಲ ಅದಕ್ಕೆ ವೈಜ್ಞಾನಿಕವಾದ ಮಹತ್ವವೂ ಇದೆ.

ಅನ್ನವು ಹಸಿವನ್ನು ಹೋಗಲಾಡಿಸುತ್ತದೆ: ಅಷ್ಟೇ ಅಲ್ಲ; ಆಹಾರಕ್ಕೆ ಪ್ರಕೃತಿಸಹಜವಾದ ಶೀತೋಷ್ಣಾದಿ ಗುಣಗಳಿರುವುದರಿಂದ ಶರೀರದ ಮೇಲೆ ಅದರ ಪ್ರಭಾವವಾಗುತ್ತದೆ. ಉಷ್ಣವಾಗಬಹುದು ಶೀತವಾಗಬಹುದು, ಪಿತ್ಥವೂ ಆಗಬಹುದು. ಹುಚ್ಚಾಟ ಪಟ್ಟಿ ವರ್ತಿಸುವವರನ್ನು "ನಿನಗೆ ಪಿತ್ಥವನ್ನು ಇಳಿಸಬೇಕೋ ಹೇಗೆ ? " ಎಂದು ಮೂದಲಿಸುವುದುಂಟಲ್ಲವೇ ? ಅಂದರೆ ಆಹಾರವು ಸಾತ್ವಿಕವಾಗಿರಬೇಕು. ಏಕೆಂದರೆ ಆಹಾರವು ಶರೀರದ ಮೇಲೆ ಬೀರುವ ಪ್ರಭಾವವು ಮನಃಸ್ಥಿತಿಯ ಸಮತೋಲನ ಅಥವಾ ಪರಿವರ್ತನೆಗೂ ಕಾರಣವಾಗುತ್ತದೆ.

ಕುರುಕ್ಷೇತ್ರ ಯುದ್ಧ ಮುಗಿದ ಮೇಲೆ ಶ್ರೀಕೃಷ್ಣನು ಭೀಷ್ಮರಿಂದ ಧರ್ಮರಾಯನಿಗೆ ಅನೇಕ ಉಪದೇಶಗಳನ್ನು ಕೊಡಿಸಿದನು. ಭೀಷ್ಮನು ಧರ್ಮಜ್ಞ, ಜ್ಞಾನಿ, ವೀರ, ನಿಸ್ವಾರ್ಥ ಜೀವಿ. ಆತನು ಧರ್ಮರಾಯನಿಗೆ ಅನೇಕ ವಿಷಯಗಳನ್ನು ಕುರಿತು ಆಚಾರ

ಧರ್ಮವನ್ನು ಹೇಳತೊಡಗಿದ. ಆಗ ದ್ರೌಪದಿ ಒಮ್ಮೆ ಕಿಸಕ್ಕನೆ ನಕ್ಕುಬಿಟ್ಟಳು. ಭೀಷ್ಮರಿಗೆ ಕಕ್ಕಾಬಿಕ್ಕಿಯಾಯಿತು. ನಗಲು ಕಾರಣವೇನೆಂದು ಕೇಳಿದಾಗ ದ್ರೌಪದಿ — "ಅಜ್ಜ, ಮೊದಲನೆಯದಾಗಿ ತಾವು ವೀರರು, ನಂತರ ಧರ್ಮವನ್ನು ತಿಳಿದವರೂ ಹೌದು. ಉಪದೇಶ ಮಾಡಲು ನೀವು ಎಲ್ಲ ರೀತಿಯಿಂದಲೂ ಅರ್ಹರೆಂಬುದು ಸರಿ. ಆದರೆ ದುರ್ಯೋಧನನು ಅಂದು ಸಭೆಯಲ್ಲಿ ನನ್ನನ್ನು ಪರಿಭವಿಸಿದಾಗ ನಿಮ್ಮ ಈ ಎರಡು ಗುಣಗಳೂ ಕೆಲಸ ಮಾಡಲಿಲ್ಲವೇಕೆ? ಧರ್ಮಜ್ಞರಾದ ನಿಮಗೆ ನಡೆದಿದ್ದು ಅಧರ್ಮವೆಂದು ಗೊತ್ತಿತ್ತು. ವೀರರಾದ ನೀವು ದುರ್ಯೋಧನನ ಅಧರ್ಮವನ್ನು ಶಕ್ತಿಯಿಂದ ನಿಗ್ರಹಿಸಿ ಧರ್ಮವನ್ನು ಕಾಪಾಡಬಹುದಾಗಿತ್ತಲ್ಲ?" — ಎಂದಳು. ಭೀಷ್ಮರು ಆ ಮಾತಿಗೆ ತಲೆದೂಗಿದರು— "ನೀನು ಹೇಳಿದ್ದು ಯುಕ್ತವಾಗಿದೆ ತಾಯಿ. ಅಂದೂ ಸಹ

# ದೇವೋ ಭವ

—'ಕೈಪು' ಲಕ್ಷ್ಮೀನರಸಿಂಹಶಾಸ್ತ್ರಿ.

ನಾನು ಧರ್ಮಜ್ಞನೂ ವೀರನೂ ಆಗಿದ್ದೆ. ಆದರೆ ದುರ್ಯೋಧನನು ದುಷ್ಟ. ಆ ದುಷ್ಟನ ಅನ್ನದ ಪ್ರಭಾವದಿಂದ ನನ್ನ ಸದ್ಗುಣಗಳ ತೀಕ್ಷ್ಣತೆಗೆ ಮಂಕು ಬಡಿದಿದ್ದದ್ದು ನಿಜ!" – ಎಂದರಂತೆ.

ಎಂತಹ ಮುದ್ದಾದ ಮಾತಿದು! ಆತಿಥ್ಯ ನೀಡುವವನ ಮನೋಭಾವಗಳ ಪರಿಣಾಮ ಅತಿಥಿಯ ಮನಸ್ಸಿನ ಮೇಲೂ ಆಗುತ್ತದೆಯೆಂದು ಇಲ್ಲಿ ತಿಳಿಯಬೇಕಾದ ಅಂಶ. ಹಸಿವಾಗುತ್ತದೆ, ಉಪಾಹಾರ ಮುಂದಿರವಿದೆ, ಒಳಕ್ಕೆ ನುಗ್ಗುತ್ತೇವೆ. ಅಲ್ಲಿ ನಮಗಾಗಿ ತಯಾರಿಸಿರುವ ತಿಂಡಿಗಳು ಸಾತ್ವಿಕವೇ ಆಗಿರಬೇಕಾಗಿಲ್ಲ. ಆತಿಥ್ಯ ಮಾಡುವವರ ಮನೋಭಾವವೂ ಅಷ್ಟೆ. ಕಡಿಮೆ ಆಹಾರ ತಿನ್ನಿಸಿ ಹೆಚ್ಚು ಗಳಿಸುವ ಹಂಚಿಕೆ ಅಲ್ಲಿ ಮುಖ್ಯವಾದುದು.

ವೇದಗಳು 'ಅತಿಥಿ ದೇವೋ ಭವ'....'ಅನ್ನಂ ಬ್ರಹ್ಮ' ಎಂದು ಸಾರುತ್ತವೆ. ಆತಿಥ್ಯ ನೀಡುವುದು ಮಾನವೀಯ ಧರ್ಮ. ನೆರೆಹೊರೆಯೋ ಸೋದರ ಮಾನವರೆಂಬ ವಿಶಾಲ ಭಾವನೆಗೆ ಅತಿಥಿ ಸತ್ಕಾರ ಒಂದು ಮೆಟ್ಟಿಲು. ಡಂಭಾಚಾರ, ಪ್ರತಿಫಲಾಪೇಕ್ಷೆ ಹೊಗಳಿಕೆಯ ಮೋಹ ಇವುಗಳಿಂದ ಹೊರತಾದ ಶುದ್ಧಾಂತರಂಗಪೂರಿತ ಆತಿಥ್ಯ ಪವಿತ್ರ ಧರ್ಮವೇ ಸರಿ. ಊಟವಿಲ್ಲದಿದ್ದರೆ ಉಪಾಹಾರ, ಒಂದು ಬಟ್ಟಲು ನೀರು ಕೊನೆಗೆ ಆದರದ ಎರಡು ನುಡಿಗಳೇ ಸಾಕು ಎನ್ನುತ್ತಾರೆ ಆತಿಥ್ಯ ಧರ್ಮವನ್ನು ವಿಶ್ಲೇಷಿಸಿರುವ ಮಾನ್ಯ ಲೇಖಕರು.

—ಸಂ.

**ಕಾಗೆ-ಹಂಸ**

'ಉಂಡ ಮನೆಗೆ ಎರಡು ಬಗೆಯುವುದು'- ಎಂಬ ನಾಣ್ಣುಡಿ ಪ್ರಸಿದ್ಧವಾದುದು. "ಎಲವೋ ಪುಂಡ ನಿನಗೆ ತಿಂದು ಪೊಗರು ಹತ್ತಿದೆಯೇನೋ?" -ಎಂದು ಗದರಿಸುವುದನ್ನು ಎಲ್ಲರೂ ಕೇಳಿರಬಹುದು. ಅತಿಥಿಯು ಆಹಾರದ ಬಗ್ಗೆ ಯಾವ ಭಾವವನ್ನು ಹೊಂದಿರಬೇಕು, ಎಂತಹ ಆತಿಥ್ಯವನ್ನು ಸ್ವೀಕರಿಸಬೇಕು-ಎಂಬ ಬಗ್ಗೆ ಇಲ್ಲಿ ಸ್ಪಷ್ಟವಾದ ಸೂಚನೆಯಿದೆ.

ಮಹಾಭಾರತದ ಕರ್ಣಪರ್ವದಲ್ಲಿ ಹಂಸದೊಡನೆ ಸ್ಪರ್ಧಿಸಿ ಸೋತುಹೋದ ಕಾಗೆಯ ಕತೆಯಿದೆ. ಕಾಗೆಯು ನಿತ್ಯವೂ ಊಟದ ಸಮಯವನ್ನು ಕಾಯುತ್ತಾ ಒಬ್ಬ ಶ್ರೀಮಂತನ ಮನೆಯ ಬಳಿ ಕುಳಿತಿರುತ್ತಿತ್ತಂತೆ. ತುಂಬಾ ಮಕ್ಕಳು ಮಂದಿಯುಳ್ಳ ಮನೆ ಅದು. ಮಕ್ಕಳು ತಾವು ತಿಂದುಳಿಸಿದ ಅನ್ನವನ್ನು ಹೊರಕ್ಕೆ ತಂದು ಎಸೆಯುವರು. ಕಾಗೆ ಪ್ರಯಾಸವಿಲ್ಲದೆ ದೊರೆತ ಅನ್ನವನ್ನು ಗಬಗಬನೆ ಮುಕ್ಕುತ್ತಿತ್ತು. ಮಕ್ಕಳಿಗೆ ನಿತ್ಯವೂ ಇದೊಂದು ವಿನೋದವೆನಿಸಿತ್ತು. ಅವರು ಬೇಕಾಗಿ ಇನ್ನಷ್ಟು ಅನ್ನವನ್ನು ಉಳಿಸಿ ಎಸೆಯುತ್ತಿದ್ದರು. ಅವರಿಗೆ ವಿನೋದ, ಕಾಗೆಗೆ ಹೆಮ್ಮೆ. ಹೊತ್ತಿಗೆ ಕಾಳಿಲ್ಲದೆ ಸೆಣಕಲಾಗಿದ್ದ ಕಾಗೆಗೆ ಮೈ ತುಂಬಿಕೊಂಡಿತು. ಮನೋಭಾವವು ಬದಲಿಸಿತು.

ಪಕ್ಷಿ ವರ್ಗದಲ್ಲಿ ತನ್ನಷ್ಟು ಬಲಿಷ್ಠವಾದ ಹಕ್ಕಿಯೇ ಇಲ್ಲವೆಂದು ಘೋಷಿಸಿ ಇತರ ಪಕ್ಷಿಗಳೆಲ್ಲವನ್ನೂ ಹೀಯಾಳಿಸಿತು. ಅದು ಒಮ್ಮೆ ಹಂಸವನ್ನು ಕೆಣಕಿತು. ಅದರೊಡನೆ ಪಂದ್ಯ ಕಟ್ಟಿಕೊಂಡಿತು. ಎರಡೂ ಸಮುದ್ರದ ಮೇಲೆ ಹಾರಿದುವು. ಹಂಸದ ಮುಂದೆ ಕಾಗೆಯೇ? ಹಾರಿ ಹಾರಿ ದಣಿದು ಸೋತ ಕಾಗೆ ಮುಂದಕ್ಕೆ ಹೋಗಲಾರದೆ, ಹಿಂತಿರುಗುವುದಕ್ಕೂ ತ್ರಾಣವಿಲ್ಲದೆ ನೀರಿಗೆ ಬಿದ್ದು ಸಾಯುವ ಸ್ಥಿತಿ ಬಂದಿತು. ಆಗ ಹಂಸವೇ ಕರುಣೆಯಿಂದ ಅದನ್ನು ದಡಕ್ಕೆ ಹೊತ್ತು ಹಾಕಿ 'ಈಗ ಹೇಳು' ಎಂದಿತು. ಗುಂಪು ಹಕ್ಕಿಗಳಲ್ಲಿ ಸೋಲನ್ನೊಪ್ಪಿಕೊಳ್ಳುತ್ತಾ ಕಾಗೆಯು -"ಉಚ್ಛಿಷ್ಟಾತ್ ದರ್ಪಿತೋಽಹಂ"- ನಾನು ಎಂಜಲು ತಿಂದು ಗರ್ವಿಸಿದೆನು. ಅದಕ್ಕೆ ತಕ್ಕ ಶಾಸ್ತಿಯಾಗಿದೆ"-ಎಂದು ಹೇಳಿತು.

**ಅಂತರಂಗ ಶುದ್ಧಿ**

ಎಂಜಲು-ಎಂಬ ಮಾತಿಗೆ ಜಿಗುಪ್ಸೆಯ ಅರ್ಥವನ್ನು ಕಲ್ಪಿಸುವುದೇ ಇಲ್ಲಿನ ಉದ್ದೇಶವಲ್ಲ. ಶಬರಿಯ ಎಂಜಲಿನಿಂದ ಕೂಡಿದ ಹಣ್ಣುಗಳನ್ನು ಶ್ರೀರಾಮನು ಅತಿಥಿಯಾಗಿ ಸ್ವೀಕರಿಸಿದನು. ದೂರ್ವಾಸಾತಿಥ್ಯದ ಸಂದರ್ಭದಲ್ಲಿ ಮೊರೆಯಿಟ್ಟ ದ್ರೌಪದಿಯಲ್ಲಿಗೆ ಬಂದ ಶ್ರೀ ಕೃಷ್ಣನು ತೊಳೆದಿಟ್ಟ ಪಾತ್ರೆಯಲ್ಲಿ ಮೆತ್ತಿಕೊಂಡಿದ್ದ ತರಕಾರಿಯ ಚೂರೊಂದರಿಂದಲೇ ತೃಪ್ತಿಗೊಂಡನು. ಆತನು ರಾಯಭಾರಿಯಾಗಿ ಬಂದಾಗ ದುರ್ಯೋಧನನು ಷಡ್ರಸೋಪೇತವಾದ ಅಡುಗೆಯನ್ನು ಮಾಡಿಸಿದ್ದರೂ, ಅದನ್ನು ನಿರಾಕರಿಸಿ ಬಡ ವಿದುರನ ಮನೆಯ ಅತಿಥಿಯಾಗಿಯೇ ಉಳಿದುಕೊಂಡ; ಹಿಡಿ ಅವಲಕ್ಕಿಯನ್ನು ಅರ್ಪಿಸಿದ ಕುಚೇಲನಿಗೆ ಅಷ್ಟೈಶ್ವರ್ಯವನ್ನು ಕರುಣಿಸಿದ.

ಈ ಕಥಾನಿದರ್ಶನಗಳ ಅಭಿಪ್ರಾಯ ತುಂಬ ಮಹತ್ವಪೂರ್ಣವಾದುದು. ಶಬರಿಯ ಭಕ್ತಿಗಾಗಿ ಶ್ರೀರಾಮನು ಎಂಜಲನ್ನು ತಿಂದನು, ವಿದುರನ ಆದರಕ್ಕಾಗಿ ಶ್ರೀಕೃಷ್ಣನು ಒಲಿದನು-ಎಂದು ಮುಗಿಸಿದರೆ ಸಾಲದು. ಆಹಾರ ಮತ್ತು ಆತಿಥ್ಯಕ್ಕೆ ಸಂಬಂಧಿಸಿದ ಮನೋವೈಜ್ಞಾನಿಕ ರಹಸ್ಯ ಗಮನಾರ್ಹವಾದುದು. ಪ್ರತಿಫಲಾಪೇಕ್ಷೆ ಅಥವಾ ಹೊಗಳಿಕೆಯ ಮೋಹ-ಇವನ್ನು ಬಿಟ್ಟು ಶುದ್ಧಾಂತರಂಗದಿಂದ-ಪವಿತ್ರಧರ್ಮವೆಂಬ ಭಾವನೆಯಿಂದ-ಆತಿಥ್ಯ ನೀಡಬೇಕು. ಅತಿಥಿಯೂ ಅಷ್ಟೆ; ಬಡಿಸುವವರಿದ್ದಾರೆಂದು ಹೊತ್ತು ಹೊತ್ತಿಗೆ ಹೋಗಿ ಪಟ್ಟಾಗಿ ಹೊಡೆದು ಜೊಂಡು ಮೈ ಬೆಳಸಿಕೊಳ್ಳುವ ಸೋಮಾರಿಯಾಗ ಕೂಡದು. ತಿಂದ ಅನ್ನ ಮೈಗೆ ಹಿಡಿಸಬೇಕು. ಎನ್ನುವಲ್ಲಿರುವ ಅಭಿಪ್ರಾಯ ಇದೇ. ತೆಲುಗಿನಲ್ಲಿ ವೇಮನ ಕವಿ ಹೇಳಿದ ಪದ್ಯ ಹೀಗಿದೆ.

ಗಂಗಿ ಗೋವು ಗಂಟೆಡೈನನು ಚಾಲು
ಕಡವ ಪೈನ ನೇಮಿ ಖರನು ಪಾಲು।
ಭಕ್ತಿ ಕಲುಗು ಪಟ್ಟೆಡೈನನು ಚಾಲು
ವಿಶ್ವದಾಭಿರಾಮ ವಿನುರವೇಮ॥

ಹಸುವಿನ ಹಾಲು ಅಭಿಷೇಕಕ್ಕೆ ಶ್ರೇಷ್ಠವಾದುದು. ಅದು ಎಷ್ಟೋ ಆಗಬೇಕಿಲ್ಲ. ಒಂದು ಸೌಟನಷ್ಟಾದರೂ ಸಾಕು. ಕತ್ತೆಯ ಹಾಲು ಒಂದು ಗಡಿಗೆಯಷ್ಟಿದ್ದರೂ ಅಭಿಷೇಕಕ್ಕೆ ಅರ್ಹವಲ್ಲ. ಹಾಗೆಯೇ ಭಕ್ತಿಯಿಂದ ನೀಡುವ ಆತಿಥ್ಯದಲ್ಲಿ ಹಿಡಿ ಅನ್ನವಾದರೂ ಸಾಕು.

ಈ ವ್ಯವಹಾರ ಧರ್ಮವು ವ್ಯತ್ಯಸ್ತವಾದಾಗ ಎಲ್ಲವೂ ಏರುಪೇರಾಗುತ್ತದೆ. 'ಅನ್ನಛತ್ರ' ಎಂದು ಬೋರ್ಡು ತಗುಲಿಸಿ ನಿರಂತರವೂ ಅನ್ನದಾನ ಮಾಡುವುದು ಕಷ್ಟವಾಗುತ್ತದೆ. ಅಂತಹ ಬೋರ್ಡು ಹಾಕಿದ ಕಡೆ ನುಗ್ಗುವ ಮಂದಿಯನ್ನು ಕಂಡಾಗ ರಾಮಾಯಣದಲ್ಲಿ ವರ್ಣಿಸಿದ ರಾವಣನ ಮೂಲ ಬಲದ ನೆನಪಾಗುವುದರಲ್ಲಿ ಆಶ್ಚರ್ಯವಿಲ್ಲ.

**ಆತಿಥ್ಯಧರ್ಮ**

ಆತಿಥ್ಯವು ಮಾನವೀಯ ಸದಾಚಾರದ ಅಂಗ. ವಿಶ್ವವೆಲ್ಲವು ಒಂದು ಕುಟುಂಬ, ನೆರೆಹೊರೆಯವರೆಲ್ಲರೂ ಸೋದರ ಮಾನವರು ಎಂಬ - ವಿಶಾಲ ಭಾವನೆಗೆ ಅತಿಥಿ ಪೂಜೆ ಒಂದು ಮೆಟ್ಟಲು. ಸದಾಚಾರವನ್ನೇ ನಮ್ಮ ಸಂಸ್ಕೃತಿ ಯಜ್ಞವೆಂದು ಕರೆಯಿತು. ಗೃಹಸ್ಥನು ಪಂಚ

ಯಜ್ಞಗಳನ್ನು ಮಾಡಬೇಕೆಂದು ಮನುಸ್ಮೃತಿಯಲ್ಲಿ ಹೇಳಿದೆ.

ಅಧ್ಯಾಪನಂ ಬ್ರಹ್ಮಯಜ್ಞಃ ಪಿತೃಯಜ್ಞಸ್ತು ತರ್ಪಣಂ।
ದೈವೋ ಹೋಮೋ ಬಲಿರ್ಭೌತೋ ನೃಯಜ್ಞೋऽತಿಥಿ-
ಪೂಜನಂ॥ (ಮನುಃ 3.70)

ಪವಿತ್ರ ಗ್ರಂಥಗಳ ಶ್ರವಣ ವಾಚನಗಳೇ ಬ್ರಹ್ಮಯಜ್ಞ; ವಂಶದ ಹಿರಿಯರಿಗೆ ಶ್ರದ್ಧಾಂಜಲಿಯೇ ಪಿತೃ ಯಜ್ಞ; ಪೂಜಾಹೋಮಾದಿ ನಿತ್ಯ ನೈಮಿತ್ತಿಕಗಳಿಂದ ಆಸ್ತಿಕ್ಯವನ್ನು ಬೆಳೆಸಿಕೊಳ್ಳುವುದೇ ದೇವ ಯಜ್ಞ;

ಪಶುಗಳಲ್ಲಿ ದಯೆತೋರಿ ಕಾಳು ಮೇವುಗಳನ್ನು ನೀಡುವುದೇ ಭೂತಯಜ್ಞ; ಅತಿಥಿಗಳನ್ನು ಅನ್ನಪಾನೋಪಚಾರಾದಿಗಳಿಂದ ಸತ್ಕರಿಸುವುದು ಪೂಜೆಗೆ ಸಮಾನ, ಅದೇ ನರಯಜ್ಞ. ಈ ಪಂಚ ಮಹಾಯಜ್ಞಗಳನ್ನು ಮಾಡದವನ ಬದುಕು ವ್ಯರ್ಥವೆಂದು ಮನು ಮಹರ್ಷಿಯ ಹೇಳಿಕೆ.

ಆಹ್ವಾನಿಸಲ್ಪಟ್ಟು ಬರುವವನು ಅಭ್ಯಾಗತ, ಪೂರ್ವಸೂಚನೆಯಿಲ್ಲದೆ ಬರುವವನು ಅತಿಥಿ. ಇಬ್ಬರಿಗೂ ನಗೆಮೊಗದ ಸ್ವಾಗತ ನೀಡಬೇಕು; ಕೈಕಾಲು ತೊಳೆಯಲು ತಂಬಿಗೆಯಲ್ಲಿ ನೀರನ್ನು ಕೊಡಬೇಕು ಅವರ ಪಾದಗಳನ್ನು ತಾವೇ ಮುಟ್ಟಿ ತೊಳೆದು, ಪಾದತೀರ್ಥವನ್ನು ತಲೆಯಮೇಲೆ ಪ್ರೋಕ್ಷಿಸಿಕೊಳ್ಳುವ ಪುಣ್ಯಕ್ಕಾಗಿ ಹಾತೊರೆಯುತ್ತಿದ್ದರು ನಮ್ಮವರು. ಇದಕ್ಕೆ ಹುಡುಗ–ಮುದುಕ ಎಂಬ ವಯಸ್ಸಿನ ಪರಿಗಣನೆ ಬೇಕಿಲ್ಲ. ಹನ್ನೆರಡು ವರ್ಷದ ಬಾಲಕನಾದ ನಚಿಕೇತನು ಯಮಲೋಕದ ಅರಮನೆಯ ಬಾಗಿಲಲ್ಲಿ ಯಮನಿಗಾಗಿ ಕಾಯುತ್ತಾ ಮೂರು ರಾತ್ರಿ ಕಳೆದನಂತೆ. ಯಮನು ಬರುತ್ತಲೇ ಆತನ ಪತ್ನಿಯು ಗಂಡನನ್ನು ಕುರಿತು– "ಅತಿಥಿಯನ್ನು ಮೊದಲು ಸತ್ಕಾರದಿಂದ ಸಮಾಧಾನ ಪಡಿಸಿರಿ. ಯಾರ ಮನೆಯ ಬಾಗಿಲಿನಿಂದ ಅತಿಥಿಯು ನಿರಾಶನಾಗಿ ಹಿಂತಿರುಗುತ್ತಾನೋ, ಆ ಗೃಹಸ್ಥನ ಪುಣ್ಯವೂ ಆ ಅತಿಥಿಯೊಡನೆ ಹಿಂತಿರುಗುತ್ತದೆ" ಎಂದು ಹೇಳಿದಳು. ಧರ್ಮದೇವತೆಯೆನಿಸಿದ ಯಮನು ಕೂಡಲೇ ನಚಿಕೇತನನ್ನು ಆದರಿಸಿ ಕರೆತಂದನು; ಆತನನ್ನು ಬಾಲಕನೆಂದು ಉದಾಸೀನಮಾಡದೆ ಪತ್ನಿಸಹಿತನಾಗಿ ಪಾದಗಳನ್ನು ತೊಳೆದನು. ಮೂರು ದಿವಸ ಕಾಯಿಸಿದ ಅನಿವಾರ್ಯ ದೋಷಕ್ಕೆ ಮೂರು ವರಗಳನ್ನು ನಚಿಕೇತನಿಗಿತ್ತು ತೃಪ್ತಿ ಪಡಿಸಿದನು.

ಹಿತವಾದ ಮಾತು, ಉಪಾಹಾರ, ಊಟ, ವಸತಿ ಸೌಕರ್ಯಗಳಿಂದ ಅತಿಥಿಯನ್ನು ಆದರಿಸಬೇಕು. ಮೇಲುಕೀಳುಗಳಿಲ್ಲದಂತೆ, ಪಂಕ್ತಿಭೇದವಿಲ್ಲದಂತೆ ಊಟದ ವ್ಯವಸ್ಥೆ ಮಾಡಬೇಕು. ಅತಿಥಿಯಲ್ಲಿ ಲೋಪದೋಷಗಳನ್ನು ಹುಡುಕುವುದು ಸಲ್ಲ. ಅತಿಥಿಯ ಉಪಚಾರದನಂತರ ಕುಟುಂಬದ ಮತ್ತು ತನ್ನ ಉಪಚಾರದ ವ್ಯವಸ್ಥೆ. ಊಟವಿಲ್ಲದಿದ್ದರೆ ಉಪಾಹಾರ, ಒಂದು ಬಟ್ಟಲು ನೀರು, ಕೊನೆಗೆ ಆದರದ ಎರಡು ನುಡಿಗಳೇ ಸಾಕು.

**ಕಥೆಗಳಲ್ಲಿ ಆದರ್ಶ :**

ಅತಿಥಿ ಪೂಜೆಯನ್ನು ವ್ರತವಾಗಿ ಸ್ವೀಕರಿಸಿ ತಮ್ಮ ಸಂಪತ್ತು, ಧನ, ಕೊನೆಗೆ ಪ್ರಾಣಗಳನ್ನೂ ಸಹ ಸಂತೋಷದಿಂದ ಅರ್ಪಿಸಿದ ಪುಣ್ಯ ಜೀವನಗಳ ಕಥೆಗಳುಂಟು. ಇತಿಹಾಸದಲ್ಲಿಯೂ ಅಂತಹ ಎಷ್ಟೋ ನಿದರ್ಶನಗಳುಂಟು.

ಅತಿಥಿ ಪೂಜೆಯನ್ನು ವಿಶ್ವಧರ್ಮವನ್ನಾಗಿ ಕಂಡವರು ಭಾರತೀಯರು. ಕಾಯಕ-ದಾಸೋಹಗಳು ಅವನ್ನೇ ಹೇಳುತ್ತವೆ. ವೇದಗಳು 'ಅತಿಥಿ ದೇವೋ ಭವ' 'ಅನ್ನಂ ಬ್ರಹ್ಮ' – ಎಂದು ಹೇಳುತ್ತವೆ. ಅತಿಥಿಯು ದೈವವಾದರೆ ಅನ್ನವು ಪರಬ್ರಹ್ಮಸ್ವರೂಪ. ಆತಿಥ್ಯವನ್ನು ಪಡೆದ ಅತಿಥಿಯು ಊಟದ ಕೊನೆಯಲ್ಲಿ 'ಅನ್ನದಾತಾ ಸುಖೀ ಭವ' –ಎನ್ನುತ್ತಾನೆ.

[26 ನೇ ಪುಟನೋಡಿ]

# ನಾನಿದ್ದು ಫಲವೇನು?

— ಶಾಂತಾದೇವಿ ಮಾಳವಾಡ.

ದೈವೀಪ್ರಜ್ಞೆಯನ್ನು ಬೆಳೆಸಿಕೊಳ್ಳದಿದ್ದ ಮೇಲೆ ಮಾನವಜೀವಿತಕ್ಕೆ ಅರ್ಥವುಂಟೆ? ಇಲ್ಲ ಎಂಬುದನ್ನು ಪ್ರಸ್ತುತ ಲೇಖನದಲ್ಲಿ ಮಾನ್ಯ ಲೇಖಕಿಯವರು ಅಕ್ಕನವರ ವಚನವೊಂದರ ವಿಶ್ಲೇಷಣೆಯ ಮೂಲಕ ಮಾಡಿಕೊಟ್ಟಿದ್ದಾರೆ.

— ಸಂ.

ಮರವಿದ್ದು ಫಲವೇನು ನೆಳಲಿಲ್ಲದನ್ನಕ?
ಧನವಿದ್ದು ಫಲವೇನು ದಯವಿಲ್ಲದನ್ನಕ್ಕ?
ಹಸುವಿದ್ದು ಫಲವೇನು ಹಾಲಿಲ್ಲದನ್ನಕ?
ರೂಪಿದ್ದು ಫಲವೇನು ಗುಣವಿಲ್ಲದನ್ನಕ್ಕ?
ಕೂಡಿದ್ದು ಫಲವೇನು ಮನವಿಲ್ಲದನ್ನಕ್ಕ?
ನಾವಿದ್ದು ಫಲವೇನು ನಿಮ್ಮ ಜ್ಞಾನವಿಲ್ಲ?
ದನ್ನಕ್ಕ ಚೆನ್ನಮಲ್ಲಿಕಾರ್ಜುನಾ?

—ಹೀಗೆ ಕೇಳಿದ್ದಾಳೆ ಅನುಭಾವಿ ಅಕ್ಕಮಹಾದೇವಿ. ಈಕೆಯು ಈ ವಚನದಲ್ಲಿ ನಮ್ಮ ಬಾಳಿನ ಸಮಸ್ಯೆ ಮೂಡಿ ಬಂದಿದೆ. ಜ್ಞಾನ, ಆಧ್ಯಾತ್ಮಿಕ ಅನುಭಾವಗಳ ಅಭಾವವು ನಮ್ಮ ನೂರೆಂಟು ಸಮಸ್ಯೆಗಳಿಗೆ ಕಾರಣವೆಂಬುದನ್ನು ಇಲ್ಲಿ ಹೇಳಲಾಗಿದೆ.

ಮರವಿದ್ದರೂ ಬಿಸಿಲಲ್ಲಿ ಬಳಲಿದ ಜನತೆಗೆ ನೆರಳು ದೊರೆಯದಿದ್ದರೆ ಆ ಮರ ಇದ್ದರೇನುಸುಖ. ಸಮಾಜ ಘಾತಕರು ನೆರಳಿಲ್ಲದ ಮರದಂತೆ ಅಂತಹ ಜನ ಇದ್ದರೂ ಅಷ್ಟೆ; ಇರದಿದ್ದರೂ ಅಷ್ಟೆ. ಮಾನವ ಸಾಮಾಜಿಕ ಜೀವಿ. ವ್ಯಕ್ತಿಯ ವಿಕಾಸವು ಸಾಮಾಜಿಕ ಹಿನ್ನಲೆಯಲ್ಲಿಯೇ ಸಾಗಬೇಕು. ಪ್ರತಿಯೊಬ್ಬ ವ್ಯಕ್ತಿ ಒಳ್ಳೆಯವನಾದರೆ ಸಮಾಜ ತಾನೇ ಸುಧಾರಿಸುವುದು. ವ್ಯಕ್ತಿಯ ವಿಕಾಸವಿಲ್ಲದೆ ಸಮಾಜವನ್ನು ತಿದ್ದಲು ಹೊರಡುವುದು ಮರವಿದ್ದೂ ನೆಳಲಿಲ್ಲದಂತಾಗುವುದು. ಆಗ ಅಂತಹ ವ್ಯಕ್ತಿ ಸಮಾಜಕ್ಕೆ ಪ್ರಯೋಜನವಿಲ್ಲದವನಾಗುವನು.

**ಧನವಿದ್ದು ಫಲವೇನು ದಯವಿಲ್ಲದನ್ನಕ್ಕ?**

ದಯೆ ದಾಕ್ಷಿಣ್ಯಗಳಿಲ್ಲದೆ, ಧನಪಿಶಾಚಿ ಹಿಡಿದ ಜನ ನಾನಾ ಮಾರ್ಗಗಳಿಂದ ಹಣ ಗಳಿಸುವುದನ್ನು ನಮ್ಮ ಸುತ್ತಲಿನ ಜೀವನದಲ್ಲಿ ನಾವಿಂದು ಕಾಣುತ್ತೇವೆ. ಒಮ್ಮೆ ಧನಮದ, ತಲೆಗೇರಿದರೆ ಅಂಥವರಿಗೆ ಉಳಿದದ್ದೇನೂ ಕಾಣುವುದಿಲ್ಲ. ಅಂಥವರನ್ನು ಕಂಡ ಅಣ್ಣ ಬಸವಣ್ಣ ಹೇಳಿದ್ದಾರೆ:

ಹಾವು ತಿಂದವರ ನುಡಿಸಬಹುದು
ಗರ ಹೊಡೆದವರ ನುಡಿಸಬಹುದು
ಸಿರಿಗರ ಹೊಡೆದವರ ನುಡಿಸಲು ಬಾರದು
ನೋಡಯ್ಯಾ॥

ಆಹಾರ ಧಾನ್ಯ ದೊರೆಯದೆ, ಜೀವನಾವಶ್ಯಕ ವಸ್ತುಗಳ ಬೆಲೆ ಗಗನಕ್ಕೇರಿದರೂ ಹಣದ ಆಶೆಗೆ ಬಿದ್ದ ಜನ, ಒಂದಕ್ಕೆ ನಾಲ್ಕು ಪಟ್ಟು ಬೆಲೆ ಏರಿಸಿ, ಹಣ ಗಳಿಸುವರು. ಆದರೆ ಅಂಥವರಿಗೆ ಮನದ ತೃಪ್ತಿಯಿರುವದಿಲ್ಲ; ಇನ್ನೂ ಗಳಿಸಬೇಕೆಂಬ ಹಂಬಲದಲ್ಲಿ

ಶಾಂತಿ, ಸಮಾಧಾನಗಳು ಅವರ ಪಾಲಿಗೆ ಕನಸಿನ ಗಂಟಾಗುತ್ತವೆ. ಅಂಥವರಿಗೆ ಮರಣ ಬಂದರೂ ನಿಶ್ಚಿಂತೆಯಿಂದ ಸಾಯಲು ಅವಕಾಶವಿರುವುದಿಲ್ಲ. ಅವರ ಜೀವ ಆ ಹಣದ ಸುತ್ತ ತಿರುಗುತ್ತಿರುತ್ತದೆ. ಈ ರೀತಿ ಗಳಿಸಿದ ಕಪ್ಪು ಹಣವನ್ನು ಕೈ ಎತ್ತಿ ಸತ್ಕಾರ್ಯಕ್ಕೆ ಕೊಡಲಾರರು. ದೇವಕಾರ್ಯಕ್ಕೆ ಕೊಟ್ಟರೂ ಅಂಥಾ ಹಣ ದೇವರಿಗೆ ಸಲ್ಲಲಾರದೆಂದು ಈ ಬಗೆಗೆ ಬಸವಣ್ಣನವರು ಹೀಗೆ ಅಭಿಪ್ರಾಯ ಪಟ್ಟಿದ್ದಾರೆ :

'ಪಾಪಿಯ ಧನ ಪ್ರಾಯಶ್ಚಿತ್ತಕ್ಕಲ್ಲದೆ ಸತ್
ಪಾತ್ರಕ್ಕೆ ಸಲ್ಲದಯ್ಯಾ
ನಾಯ ಹಾಲು ನಾಯಿಗಲ್ಲದೆ ಪಂಚಾಮೃ
ತಕ್ಕೆ ಸಲ್ಲದಯ್ಯಾ'

ಅನಾಚಾರದಿಂದ ಸಂಗ್ರಹಿಸಿದ ಹಣ ನಿಷ್ಪ್ರಯೋಜಕ. ಅಂತೆಯೇ ಅಕ್ಕಮಹಾದೇವಿ ಧನವಿದ್ದು ಫಲವೇನು ? ದಯವಿಲ್ಲದನ್ನಕ್ಕ ಎಂದು ಹೇಳಿದ್ದಾಳೆ.

'ಹಸುವಿದ್ದು ಫಲವೇನು? ಹಾಲಿಲ್ಲದನ್ನಕ್ಕ' ಎಂದು ಸುಂದರವಾಗಿ ಹೇಳಿದ್ದಾಳೆ ಅಕ್ಕಮಹಾದೇವಿ. ಗೋಮಾತೆ ದೇವರೆಂದು ಪೂಜಿಸುತ್ತೇವೆ ಅಷ್ಟೇ. ಆದರೆ ಆ ಹಸುವಿಗೆ ಸಾಕಷ್ಟು ಹೊಟ್ಟೆಗೆ ಹಾಕದೇ ಅಲಕ್ಷ್ಯದಿಂದಿದ್ದು ಹಾಲು ದೊರೆಯದಂತಾದರೆ, ಗೋವಿನ ಪೂಜೆ ಮೂಢನಂಬಿಕೆಯಾಗುವುದು. ಅದು ನಿಜವಾದ ಪೂಜೆಯಾಗಲಾರದು. ಹಸುವನ್ನು ಚೆನ್ನಾಗಿ ಮೇಯಿಸದೆ ಅದನ್ನು ಹೂವು, ಗಂಧ, ಕುಂಕುಮಗಳಿಂದ ಪೂಜಿಸುವ ಕ್ರಮ ಏನಿದೆ ಅದು ಮೂಢನಂಬಿಕೆಯಾಗಬಲ್ಲುದು. ಅಂಥ ಮೂಢನಂಬಿಕೆಗಳು ಅಳಿಯಬೇಕು.

'ರೂಪಿದ್ದು ಫಲವೇನು? ಹಾಲಿಲ್ಲದನ್ನಕ್ಕ' ಗುಣಕ್ಕೆ ಗೌರವ ಕೊಡುವುದನ್ನು ನಾವಿಂದು ಮರೆಯುತ್ತಿದ್ದೇವೆ. ಪಾಶ್ಚಾತ್ಯ ಶಿಕ್ಷಣದ ಪ್ರಭಾವದಿಂದ ರೂಪಕ್ಕೆ, ಭೌತಿಕ ದೇಹಕ್ಕೆ ಪ್ರಾಶಸ್ತ್ಯ ಕೊಡುತ್ತಿದ್ದೇವೆ. 'ಐಶ್ವರ್ಯ ನಶಿಸುವುದು, ಸೌಂದರ್ಯ ಬಾಡುವುದು, ಜೀವನ ಓಡುವದು, ಅಧಿಕಾರ ಹೋಗುವದು ಆದರೆ ದೇವನೊಬ್ಬ ಅನವರತವಿರುವನು' ಎಂದಿದ್ದಾರೆ ವಿವೇಕಾನಂದರು. ರೂಪಿದ್ದು ಗುಣವಿಲ್ಲದಿದ್ದರೆ ಪ್ರಯೋಜನವೇನು ? ಎಂಬ ಅಕ್ಕನ ವಾಣಿಯೂ ಇದೇ ಬಗೆಯದಾಗಿದೆ. ನಮ್ಮ ಆಂತರಿಕ ಗುಣಗಳನ್ನು ಬೆಳೆಸಿಕೊಂಡರೆ ಸಂಸಾರಿಕ ಹಾಗೂ ಆಧ್ಯಾತ್ಮಿಕ ಜೀವನದ ಮುನ್ನಡೆಗೆ ಸಹಾಯಕವಾಗುವದು.

'ಕೂಡಿದ್ದು ಫಲವೇನು? ಮನವಿಲ್ಲದನ್ನಕ್ಕ' ಒಂದೇ ಮನೆಯಲ್ಲಿದ್ದು ಪ್ರೀತಿ, ಅಂತಃಕರುಣೆಯಿಲ್ಲದಿದ್ದರೆ ಏನು ಪ್ರಯೋಜನ ? 'ಮನಕ್ಕೆ ಮನ ಕೂಡಿದರ ಮನಿಮಾರಗೆಳತಿ' ಎಂಬ ಜಾನಪದ ನುಡಿಯಂತೆ ದೇವರು - ಭಕ್ತ, ಪತಿ-ಪತ್ನಿ, ತಂದೆ-ಮಕ್ಕಳು, ಸ್ನೇಹಿತರಲ್ಲಿ ಪರಸ್ಪರ ಪ್ರೀತಿ ಅಂತಃಕರುಣೆಯಿದ್ದರೆ ಸುಖ, ಶಾಂತಿ ಸಂತೃಪ್ತಿಗಳು ಮನದಲ್ಲಿ ಮನೆಯಲ್ಲಿ ನೆಲೆಗೊಳ್ಳುವುದು ಸಾಧ್ಯ. ನಿಜವಾದ ಪ್ರೀತಿಯಿದ್ದರೆ ದೈಹಿಕವಾಗಿ ದೂರವಿದ್ದರೂ ಪರಸ್ಪರರು ಮನದ ಮಗ್ಗುಲಲ್ಲಿರಬಹುದಲ್ಲವೇ ?

ಮನುಷ್ಯನಾಗಿ ಹುಟ್ಟಿದ ಮೇಲೆ ದೈವೀಪ್ರಜ್ಞೆಯನ್ನು ಬೆಳೆಸಿಕೊಳ್ಳದಿದ್ದರೆ ಏನು ಫಲ ? ಸ್ಥಾನ, ಮಾನ, ಅಧಿಕಾರ ಎಲ್ಲವನ್ನೂ ಪಡೆದು ಶಾಂತಿ, ತೃಪ್ತಿ, ಸಮಾಧಾನಗಳಿಲ್ಲದೆ ಬಳಲುತ್ತಿದ್ದರೆ ಪ್ರಯೋಜನವೇನು ? ಮಾನವನು ದೇವಮಾನವನಾಗುವ ಜ್ಞಾನವೇ ನಿಜವಾದ ಜ್ಞಾನವೆಂದು ಅಕ್ಕಮಹಾದೇವಿ ನಂಬಿದಳು. ಅಂತಹ ಜ್ಞಾನ ಪಡೆಯುವ ಸಂಕಲ್ಪ ಮಾಡಿದಳು; ಸಿದ್ಧಿಯನ್ನು ಪಡೆದಳು. ಸಾಮಾನ್ಯ ಮನೆತನದಲ್ಲಿ ಹುಟ್ಟಿದ ಅಕ್ಕಮಹಾದೇವಿ ತನ್ನ ರೂಪಕ್ಕೆ ಮೆಚ್ಚಿದ ಅರಸನನ್ನು ತೊರೆದು ನಿಜಗುಣಭರಿತನಾದ ಪರಮಾತ್ಮನನ್ನು ಪಡೆದಳು. ಸಾಧನೆಯಿಂದ ಸಿದ್ಧಿಯು ಸಾಧ್ಯವೆಂಬುದನ್ನು ಜನಸಾಮಾನ್ಯರಿಗೆ ತೋರಿಸಿಕೊಟ್ಟಳು. —

# ಅದ್ವಿತೀಯ ಗಡಿಯಾರ

— ಪ. ರಾಮಕೃಷ್ಣಶಾಸ್ತ್ರಿ.

ಡೆನ್ಮಾರ್ಕಿನ ಕೋಪನ್ ಹೇಗನ್ ನಗರದ ಒಂದು ಸಭಾಭವನದಲ್ಲಿ ಒಂದು ಕೋಣೆಯೊಳಗೆ ಅದ್ಭುತವಾದ ಖಗೋಳ ವೈಜ್ಞಾನಿಕ ಗಡಿಯಾರವನ್ನಿರಿಸಲಾಗಿದೆ. ಅದನ್ನು ನೋಡಲು ಒಂದು ರೂಪಾಯಿ ಶುಲ್ಕವನ್ನು ತೆರಬೇಕು. ಗಡಿಯಾರದೊಳಗೆ ಅತಿ ಮೆಲ್ಲನೆ ಚಲಿಸುತ್ತಿರುವ ಚಕ್ರವೊಂದು ಪೂರ್ಣ ಸುತ್ತು ಬರಬೇಕಾದರೆ 25700 ವರ್ಷಗಳೇ ಬೇಕು. ಅದು ಎಷ್ಟು ನಿಖರವಾದ ವೇಳೆ ತೋರಿಸುತ್ತದೆಂದರೆ 750 ವರ್ಷಗಳಲ್ಲಿ ಕೇವಲ ಒಂದು ಸೆಕೆಂಡಿನಷ್ಟು ವ್ಯತ್ಯಾಸ ವುಂಟಾಗಬಹುದು. ಗಡಿಯಾರದ ಮುಖಫಲಕವನ್ನು (Dial) 12 ಭಾಗಗಳಾಗಿ ವಿಂಗಡಿಸಲಾಗಿದೆ ಒಂದು ಭಾಗ ಎಲ್ಲಾ ಗಡಿಯಾರಗಳಂತೆಯೇ ವೇಳೆಯನ್ನು ತೋರಿಸಬಲ್ಲುದಾದರೆ ಇನ್ನೊಂದರಲ್ಲಿ 5,70,000 ವರ್ಷಗಳ ಕ್ಯಾಲೆಂಡರನ್ನು ಕಾಣಬಹುದು. ಸೂರ್ಯೋದಯ ಮತ್ತು ಸೂರ್ಯಾಸ್ತಮಾನಗಳ ವಿವರ ಮತ್ತೊಂದು ಭಾಗದಲ್ಲಿ. ಕ್ರೈಸ್ತ ಹಬ್ಬಗಳ ವಾರ, ದಿನಾಂಕ ಇನ್ನೊಂದೆಡೆಯಲ್ಲಿ. ಮುಂದಿನ ನಾಲ್ಕು ಸಾವಿರ ವರ್ಷಗಳಲ್ಲಿ ಯಾವ ತಾರೀಖು ಯಾವ ವಾರವಾಗುತ್ತದೆ; ಜಗತ್ತಿನ ಯಾವ ಭಾಗದಲ್ಲಿ ಯಾವ ದಿನ ಯಾವ ಸಮಯದಲ್ಲಿ ಸೂರ್ಯ ಮತ್ತು ಚಂದ್ರಗ್ರಹಣಗಳು ಆಗುತ್ತವೆಯೆಂದು ತಿಳಿಯಲು ಈ ಗಡಿಯಾರದ ಶರಣು ಹೊಕ್ಕರೆ ಮುಗಿಯಿತು. ಗಡಿಯಾರದ ಒಂದು ಡಯಲ್ ಸೌರಕಾಲವನ್ನೂ ನಕ್ಷತ್ರ ಕಾಲವನ್ನೂ ತೋರಿಸಬಲ್ಲುವು. ಅಧಿಕ ವರ್ಷವನ್ನೂ ಗಡಿಯಾರ ಗಣಿಸಬಲ್ಲುದು.. ಈ ವ್ಯತ್ಯಾಸವನ್ನು ತೋರಿಸಲೆಂದೇ ಅದರ ತಾರೀಖು ತೋರಿಸುವ ಕೈಗಳ ಕೆಳಗಿರುವ ಚಕ್ರ 400 ವರ್ಷಗಳಲ್ಲಿ ಒಂದು ಸುತ್ತು ಬರಬಹುದು. ಹತ್ತು ಸೆಕೆಂಡುಗಳಲ್ಲಿ ಒಂದು ಸುತ್ತು ಬರುವ ಚಕ್ರವೂ ಅದರಲ್ಲಿದೆ.

> ವಿಶ್ವದಲ್ಲೇ ತನಗೆ ಸರಿಸಾಟಿಯಿಲ್ಲವೆನಿಸುವಷ್ಟು ಅಧ್ಭುತವಾದ ಗಡಿಯಾರ ಡೆನ್ಮಾರ್ಕಿನ ಕೋಪನ್ ಹೇಗನ್‌ನಲ್ಲಿದೆ. ಅದರ ನಿರ್ಮಾತೃ ಜೇನ್ಸ್ ಓಲ್ಸೇನ್‌ನ ಸಾಹಸ ಪೂರ್ಣ ಕಥೆಯನ್ನು ಅತ್ಯಂತ ರೋಚಕವಾಗಿ ಮಾನ್ಯ ಲೇಖಕರು ನಮ್ಮ ಓದುಗರ ಮುಂದಿಟ್ಟಿದ್ದಾರೆ. ಇದನ್ನು ಓದುವ ಯಾರಿಗೇ ಆಗಲಿ ಅದನ್ನು ನೋಡಿಬರುವ ಅವಕಾಶ ಸಿಗಬಾರದೇ ಎನಿಸದಿರುವುದಿಲ್ಲ.
>
> —ಸಂ.

ಜನವರಿ ಒಂದನೆಯ ದಿನಾಂಕ ಆರಂಭವಾಗುವ 6 ನಿಮಿಷಗಳ ಮೊದಲು ಈ ಗಡಿಯಾರ ಜೋರಾಗಿ ಕರಗಂಟೆ ಬಾರಿಸಿ, ಮುಂದಿನ ವರ್ಷದ ಕ್ರಿಶ್ಚಿಯನ್ ಹಬ್ಬಗಳ ಪಟ್ಟಿಯನ್ನೊಪ್ಪಿಸುತ್ತದೆ. ಅದು ಹೇಳುವ ದಿನಗಳು ನಿಶ್ಚಿತವಾಗಿರುತ್ತವೆ. ಬೇರೆ ಬೇರೆ ಗ್ರಹಗಳ ಸಂಚಾರ ಸಮಯದ ಮಾಹಿತಿಯನ್ನು ಕೊಡಬಲ್ಲ ಈ ಗಡಿಯಾರ ಸ್ಥಳೀಕ ಸಮಯದ ಜೊತೆಗೆ ಜಗತ್ತಿನ ಎಲ್ಲಾ ಭಾಗಗಳ ನಿರ್ದಿಷ್ಟ ಸಮಯವನ್ನೂ ತಿಳಿಸಬಲ್ಲದು.

ಈ ಗಡಿಯಾರದ ಆರಂಭೋತ್ಸವವನ್ನು 1955 ರ ಡಿಸೆಂಬರ್ 15 ರಂದು ಡೆನ್ಮಾರ್ಕಿನ ರಾಜ 9 ನೇ ಫ್ರೆಡ್ರಿಕ್‌ರು ನೆರವೇರಿಸಿದರು. ಅದನ್ನು ನಿರ್ಮಿಸಿದವ ಜೇನ್ಸ್ ಓಲ್ಸೇನ್.

ಜೇನ್ಸ್ ಓಲ್ಸೇನ್ 1872 ರಲ್ಲಿ ರೈಬ್ ಎಂಬ ಗ್ರಾಮದ ಬಡ ಕುಟುಂಬವೊಂದರಲ್ಲಿ ಹುಟ್ಟಿದ. ಅವನ ತಂದೆ ನೇಯ್ಗೆ ಕೆಲಸ ಮಾಡುತ್ತಿದ್ದ. ಒಂದು ದಿನ ಜೇನ್ಸ್ ತನ್ನ ಅಕ್ಕ ಓದಿ ಹೇಳಿದ ಕಥೆಯೊಂದನ್ನು ಕೇಳಿದ. ಅದರಲ್ಲಿ ಒಂದು ಅರಮನೆಯಲ್ಲಿದ್ದ ಗಡಿಯಾರದ ವಿಚಾರವಿತ್ತು. ಈ ಗಡಿಯಾರದಲ್ಲಿ ಪ್ರತಿ ಗಂಟೆಗೊಮ್ಮೆ ಯಾಂತ್ರಿಕ ಗರುಡ ಪಕ್ಷಿಯೊಂದು ಕಾಣಿಸಿ, ಎಷ್ಟು ಗಂಟೆಯಾಯಿತೋ ಅಷ್ಟು ಸಲ ರೆಕ್ಕೆ ಬಡಿಯುತ್ತಿತ್ತು. ಒಮ್ಮೆ ಆ ಗಡಿಯಾರ ಕೆಟ್ಟುಹೋಯಿತು. ಅನಂತರ ಅದನ್ನು ರಿಪೇರಿ ಮಾಡಲು ಯಾರಿಗೂ ಸಾಧ್ಯವಾಗಲಿಲ್ಲವಂತೆ.

ಈ ಕಥೆ ಕೇಳಿದ ಜೇನ್ಸ್ ತಾನು ದೊಡ್ಡವನಾದ ಮೇಲೆ ಅದನ್ನು ರಿಪೇರಿ ಮಾಡಬೇಕೆಂದು ಕನಸು ಕಟ್ಟಿದ. ಜೀವನೋಪಾಯಕ್ಕಾಗಿ ಅವನು ಕೀಲಿ ಕೆಲಸ ಕೈಗೊಂಡರೂ ಗಡಿಯಾರದ ಕೆಲಸ ಕಲಿಯಬೇಕೆಂಬ ಮಹದಾಸೆ ಅವನಲ್ಲಿತ್ತು. ಅವನು ಬೇರೆ ಉದ್ಯೋಗಕ್ಕಾಗಿ ನಗರಗಳನ್ನು ಸಂಚರಿಸುತ್ತಾ ಸ್ಟ್ರಾಸ್‌ಬರ್ಗಿಗೆ ಬಂದನು. ಅಲ್ಲಿನ ಚರ್ಚಿನಲ್ಲಿದ್ದ ಜಗತ್ಪ್ರಸಿದ್ಧ ಗಡಿಯಾರವನ್ನು ದಿನವಿಡೀ ಕುಳಿತು ನೋಡಿದ. ಅದರ ರಚನಾಕ್ರಮ ನೋಡಿ ತಾನೂ ಗಡಿಯಾರ ತಯಾರಕನಾಗಬೇಕೆಂಬ ಆಸೆ ಅವನಲ್ಲಿ ಮೊಳೆಯಿತು. ಎಳೆತನದಿಂದಲೇ ಖಗೋಳ ವಿಜ್ಞಾನ, ಯಂತ್ರಶಾಸ್ತ್ರ ಮತ್ತು ಗಡಿಯಾರಗಳ ಬಗೆಗೆ ಕೈಗೆ ಸಿಕ್ಕಿದ ಪುಸ್ತಕಗಳನ್ನೆಲ್ಲಾ ಆತ ಓದಿದ್ದ. ದೊಡ್ಡಗಡಿಯಾರಗಳೆಲ್ಲ ಹೇಗೆ ಕೆಲಸ ಮಾಡುತ್ತವೆಂದು ನೋಡಲು ಆತ ಯೂರೋಪಿನಾದ್ಯಂತ 5 ವರ್ಷಕಾಲ ಸಂಚರಿಸಿದ. ಸ್ವಿಜರ್ಲೆಂಡಿಗೆ ಹೋಗಿ ಗಡಿಯಾರ ತಯಾರಿಕಾ ಕಲೆಯನ್ನು ಅಭ್ಯಾಸ ಮಾಡಿದ. ಅಲ್ಲಿಯ ವಿಶ್ವವಿದ್ಯಾನಿಲಯದಲ್ಲಿ ಗಣಿತ ಮತ್ತು ಖಗೋಳ ಶಾಸ್ತ್ರದಲ್ಲಿ ಪ್ರವೀಣನಾದ. ಪ್ಯಾರಿಸ್ ಮತ್ತು ಲಂಡನ್‌ಗಳಲ್ಲೂ ಕೆಲವು ದಿನವಿದ್ದು, 1900 ರಲ್ಲಿ ಡೆನ್ಮಾರ್ಕಿಗೆ ಹಿಂತಿರುಗಿದ.

ಡೆನ್ಮಾರ್ಕಿನಲ್ಲಿ ಗಡಿಯಾರ ನಿರ್ಮಾಣಕ್ಕಾರಂಭಿಸಿದ ಜೇನ್ಸ್ ಓಲ್ಸೇನ್ ಕೆಲವೇ ಸಮಯದಲ್ಲಿ ಗಡಿಯಾರ ತಯಾರಿಕೆಯಲ್ಲಿ, ಅದರ ಬಿಡಿಭಾಗಗಳ ನಿರ್ಮಾಣದಲ್ಲಿ, ಮತ್ತು ಖಗೋಳ ವಿಜ್ಞಾನದಲ್ಲಿ ನಿಪುಣನಾದ. ಖಗೋಳ ವಿಜ್ಞಾನದಲ್ಲಿ ಅವನೊಬ್ಬ ಮೆಕ್ಯಾನಿಕ್ ಎಂದೇ ಪರಿಗಣಿಸಿ, ಅಲ್ಲಿನ ವೈಜ್ಞಾನಿಕ ಕೇಂದ್ರಗಳು ಕೆಲವು ಸೂಕ್ಷ್ಮ ಕೆಲಸಗಳನ್ನು ಅವನಿಗೊಪ್ಪಿಸುತ್ತಿದ್ದವು.

1905 ರಲ್ಲಿ ಮದುವೆಯಾದಮೇಲೆ ಜೇನ್ಸ್ ತನ್ನ ಹೆಂಡತಿಯ ಊರಾದ ಹೆಲ್ಸಿಂಗ್ನಾಡೆಯಲ್ಲಿ ನೆಲೆಸಿದ. ಖಗೋಳ ವೈಜ್ಞಾನಿಕ ಗಡಿಯಾರವನ್ನು ತಯಾರಿಸುವ ಕಲ್ಪನೆ ಹಿಂದಿನಿಂದಲೇ ಅವನ ತಲೆಯಲ್ಲಿ ಸುಳಿಯುತ್ತಿತ್ತು. ಅದಕ್ಕಾಗಿ ತನ್ನ 50 ನೆಯ ವಯಸ್ಸಿನವರೆಗೂ ಮಾಹಿತಿಗಳನ್ನು ಸಂಗ್ರಹ ಮಾಡಿದ. ಅದನ್ನು ಖ್ಯಾತ ಖಗೋಲ ಶಾಸ್ತ್ರಜ್ಞ ಪ್ರೊ। ಸ್ಟ್ರೋಮಗ್ರೇನನಿಗೆ ತೋರಿಸಿ ದೃಢ ಪಡಿಸಿಕೊಂಡ.

ಜೇನ್ಸ್ ಹಣಕ್ಕಾಗಿ ಪರದಾಡಬೇಕಾಗಿ ಬಂತು. ಹಣ ಸೇರಿಸಲು 20 ವರ್ಷ ಬೇಕಾಯಿತು. ಅವನು ತನ್ನ 70 ನೆಯ ವಯಸ್ಸಿನಲ್ಲಿ ಸಂಗಡಿಗರೊಂದಿಗೆ ಅದರ ನಿರ್ಮಾಣಕ್ಕೆ ಕೈ ಹಚ್ಚಿದನು. ಇದರ ನಡುವೆ ಆತ ಅನೇಕ ಗಂಡಾಂತರಗಳನ್ನು ಎದುರಿಸಬೇಕಾಯಿತು. ಹೆಂಡತಿ ಖಾಯಿಲೆಯಿಂದ ಹಾಸಿಗೆ ಹಿಡಿದಳು. 1944 ರಲ್ಲಿ ವಯಸ್ಸಿಗೆ ಬಂದ ಮಗ ಅಪಘಾತಕ್ಕೀಡಾದ. ಆದರೂ ಜೇನ್ಸ್ ಸ್ಥಿತಪ್ರಜ್ಞನಂತೆ ದುಡಿದ.

ಆದರೆ ತನ್ನ ಕನಸು ನನಸಾಗುವುದನ್ನು ಕಾಣುವ ಅದೃಷ್ಟ ಜೇನ್ಸ್‌ನಿಗಿರಲಿಲ್ಲ. ಒಂದು ಖಾಯಿಲೆಗೆ ಅವನು ತುತ್ತಾದ. ಅವನಿಗೆ ಆಪರೇಷನ್ ಮಾಡಲಾಯಿತು. ಪೂರ್ಣ ಸ್ವಸ್ಥಗೊಳ್ಳುವ ಮೊದಲೇ 1945 ರ ನವೆಂಬರ್ 17 ರಂದು ಅವನು ಅಸು ನೀಗಿದ.

[18 ನೇ ಪುಟನೋಡಿ]



# ನಾಸ್ತಿಕ

— ಎ. ಎಸ್. ವಸಂತ.

ಒಲಿದೊಡೆ ಕೊಂಡಾಡು; ಅಲ್ಲದೊಡೆ ಸುಮ್ಮನಿರಿ
ಆತ ಯೋಗಿ; ನೀನು ಭೋಗಿ
ಆತ ಸುರಲೋಕದ ತಪಸಿ; ನೀ ನರಲೋಕದ ಮಾನವ
ನೀ ಕಾಮಿ; ನಾ ಕಾಮಿ

ನೀ ಜರಿದ ಶಿವೈಕ್ಯಕ್ಕೆ ನೀ ಹೋಗುವುದಿಲ್ಲವಾ
ಶಿವಭಕ್ತರಿಗೆ ಹರಲೋಕವಾದರೇನು? ನರಲೋಕ
ವಾದರೇನು?
ಭಕ್ತಿಯ ಮರ್ಮವನ್ನು ನೀನೆತ್ತಬಲ್ಲೆ ಮಾನವ?
ಮಾನವ ಲಿಂಗಾರ್ಚನೆಯಂ ಮಾಡಿ
ಮೃಡನಿಗೊಂದು ಪತ್ರವನ್ನೆಸಗಲು
ಆ ಪುರವೇ ಹರಿಗೋಲಾಗಿ
ಆಕಾಶವೇ ಭವಶರಧಿಯಾಗಿ
ನೀನೇ ಅಂಬಿಗನಾಗಿ

ಮುಕ್ತಿಯ ರಾಜ್ಯಕ್ಕೆ ನೀ ಹೋಗಿರಲು
ಹಾಡಿ ಪೊಗಳಲು ಅನಿತವು
ಕೈಲಾಸ ನಿನ್ನ ಮನೋಮಂದಿರಕೆ ಬರಲು
ಇನ್ನೇನು ಬೇಕು ಹೇಳು ಬಸವಲಿಂಗನ
ಕರುಣೆ ಪಡೆದವಗೆ?

# ಆಸ್ತಿಕ್ಯ

— ಶಂಕರ ಮೊಕಾಶಿ ಪುಣೇಕರ.

ಅಸ್ಮಿಯೆನ್ನುವ ನುಡಿಗೆ ಅಸ್ತಿವಾರವು ಅಸ್ತಿ
ಆಸ್ತಿಕ್ಯವೆನ್ನುವುದು ಅಸ್ಮಿಕೆಗೆ ಒಳಹಾದಿ
ಮನದ ಕೇಂದ್ರೋನ್ಮನವೆ ಬ್ರಹ್ಮಗ್ರಂಥಿ ಅನಾದಿ

ಸಪ್ತರ್ಷಿ ಕೂಟಸ್ಥ ಧ್ರುವನೆ ಏಕಗಭಸ್ತಿ
ಘಟದ ಅಂತಃಪಟದ ಉತ್ಪಾಟನೆಯೆ ಸ್ವಸ್ತಿ
ಪೂರ್ವನಿರ್ಣಿತ ವಧೂವರರ ಮಿಲನವೆ ಶಾದಿ
ಕಣ್ಗೆ ಕಾಂಬುದು ಇಷ್ಟೆ! ಸ್ವಪ್ರತ್ಯಯವೆ ಸಾಕ್ಷಿ
ಇಣುಕದಿರು ಬೆಳಕಿಂಡಿಗಿಕ್ಕಿ ನಿನ್ನೇಕಾಕ್ಷಿ

ನಿನ್ನದಿರೆ ನಡೆ ಒಳಗೆ! ಇಲ್ಲಿ ನಿನಗಿದೆ ಹಕ್ಕು
ಹೊರಗಿಂದೆ ನುಡಿಯಲ್ಕೆ ಶಾದೀಮು ಬಾರಕ್ಕು
ಅಸ್ತಿಯಿಲ್ಲದ ಅಸ್ಮಿಗೊಲಿದ ನಾಸ್ತಿಕವಾದಿ,
ಬರಡು ಗಿಡದಲಿ ಕುಳಿತು ಸ್ವಂತ ಮೈಯನು ಕೊಕ್ಕು-
ಕಿರುವ ಕುರುಡ ಅತೃಪ್ತ ಒಂದೆ ಗೂಗೀ ಘುಕ್ಕ!
ಪೆಟಿ ಬೂರ್ಝ್ವ ವ್ಯಕ್ತಿ ವೈಶಿಷ್ಟ್ಯ ಮಂತ್ರದ ಗೊಣಗ
ನಂಬಿ ಪಠಿಸುತ್ತಿರುವ ಪೆಟಿ ಇಂಟೆಲೆಕ್ಚುಯಲ್
ಡೊಣಗ!
ಏಕೆ? ಬಾತಿತೆ ಬಹಳ ಪರ್ಸನ್ಯಾಲಿಟಿ ಊದಿ?
ಅದನೆ ನೆಕ್ಕುತ ಸುತ್ತುತಿರುವಿಯಲ್ಲೋ ಸೊಣಗ!
ಅದೆತಾನೆ ಘಳಿಗೆ ಬಟ್ಟಲು ಬೀಳುತಿರುವಾಗ
ಗಂಗಾಳ ನೀರು ಕಂಡಳಿಯುಂಗೆ ಮುಲರೋಗ

ನೋಡು! ಜ್ವಲಿಸುತ್ತಿಹುದು ಇಂಪರ್ಸನಲ್ ವೇದಿ-
ಮೇಲೆ ಆಹವನೀಯ ಅಗ್ನಿಪುರುಷನ ಯಾಗ!
ವ್ಯಕ್ತಿತ್ವ ಹವನೀಯ! ಕಾವ್ಯ ಹೋಮದ ಬೂದಿ
ಇದನು ಹಣೆಗಿಟ್ಟು ಉಣ್ಣುವ ರಸಿಕ ಶಿಷ್ಟಾನ್ನ
ಅಸ್ಮಿ-ಅಸ್ತಿಗಳ ದಾಂಪತ್ಯ ನಡೆಸಿದೆ ಜನ್ನ
ಇದುವೆ ಎಲಿಯಟ್ ನುಡಿದ ವ್ಯಕ್ತಿ ಎಕ್ಸ್ಟಿಂಕ್ಷನ್ನ
ಗಿಳಿ ಪಾಠ ಓದಿದೆಯ? ಎಲ್ಲಿಹುದು ತರದೂದಿ?
(ಆಧ್ಯಾತ್ಮಿಕ ಕಾವ್ಯವನ್ನು ತೆಗಳುವ
ತಾರ್ಕಿಕ ವಿಮರ್ಶಕ ನಾಸ್ತಿಕರಿಗೆ)

# ಕ್ರಿಸ್ತ ಜಯಂತಿ

ಲೇಖಕರು – ಆಚಾರ್ಯ ಕಾಕಾ ಕಾಲೇಲಕರ.
ಅನುವಾದ – ಮ. ಗ. ಶೆಟ್ಟಿ.

ಯೇಸುವಿನ ಉಪದೇಶಗಳು ವಿಚಾರಧಾರೆಗಳು ಕೇವಲ ಕ್ರೈಸರಿಗೇ ಅಂದರೆ ಒಂದು ಪಂಥದವರಿಗೆ ಮಾತ್ರ ಸೀಮಿತವಾದವುಗಳಲ್ಲ; ಅವು ಮಾನವ ಜನಾಂಗಕ್ಕೇ ಭಕ್ತಿಭಾವದ ಆಚರಣೆಯು, ಸದ್ಗುರುವಿನ ಉಪಾಸನೆಯ ಮಾರ್ಗ ತೋರಿಸುತ್ತವೆ.

—ಸಂ.

ಭಗವದ್ಗೀತೆಯಲ್ಲಿ ಭಗವಂತನು ಈಶ್ವರನ ಅನೇಕ ವಿಭೂತಿಗಳನ್ನು ಉದಾಹರಿಸಿ ವರ್ಣಿಸಿದ್ದಾನೆ. ಆ ಕಾಲದಲ್ಲಿ ಪ್ರೇಮಮೂರ್ತಿ, ಈಶ್ವರ-ಭಕ್ತ, ಬ್ರಹ್ಮಚಾರಿ ಯೇಸುವಿನ ಅವತಾರವಾಗಿರಲಿಲ್ಲ; ಇಲ್ಲವಾದರೆ ಸಕಲ ವಿಶ್ವದ ವಿಷಯದಲ್ಲಿ ಸದ್ಭಾವನೆಯನ್ನು ಇಟ್ಟುಕೊಂಡಿರುವ ವಿಭೂತಿಯೆಂದು ಭಗವಂತನು ಯೇಸುವಿನ ಉಲ್ಲೇಖವನ್ನು ಮಾಡದೇ ಇರುತ್ತಿರಲಿಲ್ಲ. ಬುದ್ಧ ಭಗವಾನನಂತೆ ಯೇಸುವಿನ ಜೀವನವು ಸಹ ಕರುಣ ಗಂಭೀರ ಮತ್ತು ಉದಾತ್ತ ಕೋಮಲವಾಗಿದೆ. ಒಬ್ಬ ಸಾಮಾನ್ಯ ಕಮ್ಮಾರನ ಅಶಿಕ್ಷಿತ ಹುಡುಗ ಬಾಲ್ಯದಲ್ಲಿಯೇ ಚಿಂತನ ಶೀಲನಾಗಿ ದೊಡ್ಡ ದೊಡ್ಡ ಸಾಧುಪುರುಷರಿಗೆ ಮತ್ತು ಧರ್ಮಾಚಾರ್ಯರಿಗೆ ತಮ್ಮ ಮನಸ್ಸಿನಲ್ಲಿ ಕುದಿಯುತ್ತಿರುವ ವಿಚಾರಗಳ ಬಗ್ಗೆ ಪ್ರಶ್ನೆಗಳನ್ನು ಕೇಳುವುದು ಅವರ ಉತ್ತರದಿಂದ ಸಮಾಧಾನವಾಗದಿದ್ದರೆ ವಾದ ವಿವಾದ ಮಾಡಿ ಅವರನ್ನು ನಿರುತ್ತರಗೊಳಿಸುವುದು, ಆಳ ವಿಚಾರದಿಂದ ಸ್ವತಂತ್ರ ಧಾರ್ಮಿಕ ವಿಚಾರವನ್ನು ಬೆಳಸಿ ಕೇವಲ ಅನನ್ಯಶ್ರದ್ಧೆಯಿಂದ ಮತ್ತು ಈಶ್ವರ ಕೃಪೆಯಿಂದ ಈಶ್ವರನಿಷ್ಠನಾಗುವುದು –ಅದ್ಭುತವಲ್ಲದಿದ್ದರೂ ಅಲೌಕಿಕ ಘಟನೆಯಾಗಿದೆ. ಈಶ್ವರನು ಸರ್ವಶಕ್ತನಾಗಿದ್ದಾನೆ, ಕ್ಷಮಾಶೀಲನಷ್ಟೇ ಅಲ್ಲ ಎಲ್ಲವನ್ನೂ ಸಹಿಸುವವನಾಗಿದ್ದಾನೆ ಎಂಬುದನ್ನು ಕಂಡುಕೊಂಡ ಸತ್ಪುರುಷರಲ್ಲಿಯೂ ಯೇಸುವಿನ ಸ್ಥಾನ ಅಲೌಕಿಕವಾದುದಾಗಿದೆ. ಬ್ರಹ್ಮಚರ್ಯದ ಮಹತ್ವವನ್ನು ಅರಿತು ಆ ರಸಾಯನ ಸಾಧ್ಯಗೊಳಿಸುವ ತಪಸ್ವಿಗಳು ಅನೇಕರಿದ್ದರು, ಸಹಜಸಿದ್ಧವಾದ ಬ್ರಹ್ಮಚರ್ಯವನ್ನು ಆಚರಿಸುವ ಸತ್‌ಪುರುಷರಲ್ಲಿ ಸಹ ಯೇಸುವು ಎದ್ದು ಕಾಣುತ್ತಾನೆ. ಯಾಕೆಂದರೆ ಆತನಿಗೆ ಆ ಈಶ್ವರೀಕೃಪೆಯ ಬಗ್ಗೆ ಅಹಂಕಾರವಿರಲಿಲ್ಲ. ಯಾಕೆಂದರೆ ಅದು ದೇವರು ಕೊಟ್ಟ ದೇಣಿಗೆಯೆಂದೇ ಅವರ ಭಾವನೆಯಿತ್ತು; ಮತ್ತು ಪ್ರಯತ್ನದಿಂದ ಸಾಧಿಸುವವರಿಗೆ ಅದು ಕಬ್ಬಿಣದ ಕಡಲೆಯೆಂದು ಅವರಿಗೆ ಗೊತ್ತಿತ್ತು. ಯಾವುದಾದರೂ ಬ್ರಹ್ಮಚಾರಿಯು ಸ್ತ್ರೀ ಜಾತಿಯ ಉದ್ಧಾರಕ್ಕಾಗಿ ತನ್ನ ಹೃದಯವನ್ನು ಹಿಂಡಿ ಹಿಪ್ಪೆಮಾಡಿದ್ದಿದ್ದರೆ ಆತ ಯೇಸುವೇ. ಈ ಪರಿಯ ಉತ್ತಮ ಗುಣವನ್ನು ಆ ಕಾಲದ ಜನ ಅರಗಿಸಿಕೊಳ್ಳಲು ಸಾಧ್ಯವಾಗದುದರಿಂದಲೇ ಸಾಕ್ರೆಟೀಸನಿಗೆ ಮರಣದಂಡನೆಯನ್ನೂ, ಪ್ರಭು ಪುತ್ರ ಯೇಸುವಿಗೆ ಶಿಲುಬೆಯ ಮೇಲೇರಿಸಿ ಮರಣದಂಡನೆಯನ್ನೂ ಇತ್ತರು. ಅನೇಕ ಅವತಾರ ಪುರುಷರು ತಮ್ಮ ತಮ್ಮ ಶಿಷ್ಯರಿಗೆ ಮತ್ತು ಭಕ್ತರಿಗೆ ಭಕ್ತಿ ಧರ್ಮದ ದೀಕ್ಷೆಯನ್ನು ಕೊಟ್ಟಿದ್ದಾರೆ. ಯೇಸುವು ತನ್ನ ಶ್ರಾವಕರಿಗೆ ಮತ್ತು ಅನುಯಾಯಿಗಳಿಗೆ ಕೊಟ್ಟ ಉಪದೇಶಗಳಲ್ಲಿ ಸಂಗ್ರಹಿತವಾದ ಕೆಲವು ಉಪದೇಶಗಳು ಸಾವಿರಾರು ವರ್ಷಗಳಿಂದ ಕೋಟ್ಯಾವಧಿ ಜನರ ಮೇಲೆ ಪರಿಣಾಮ ಬೀರುತ್ತಲಿವೆ.

(26ನೇ ಪುಟ ನೋಡಿ)

# ಮಣ್ಣೇ ಇಲ್ಲದೆ ಹುಲುಸು ಬೆಳೆ

— ಕ್ಯಾಪ್ಟನ್ ಎಂ ಜಿ. ಕೆ. ಮೂರ್ತಿ.

ನೆಲವಿಲ್ಲದೆ ಬೆಳೆ ತೆಗೆಯುವುದಾದರೂ ಹೇಗೆ? ಈ ಸಮಸ್ಯೆಗೆ ಉತ್ತರ ಇಲ್ಲಿದೆ ಹೈಡ್ರೋಫೋನಿಕ್ ಕ್ರಮದಿಂದ ಮಣ್ಣೇ ಇಲ್ಲದೆ ಹಣ್ಣುಹಂಪಲು, ಕಾಯಿಪಲ್ಲೆ, ದವಸಧಾನ್ಯ ಎಲ್ಲವನ್ನೂ ಹೆಚ್ಚಿನ ಪ್ರಮಾಣದಲ್ಲಿ ಬೆಳೆಯಬಹುದೆಂದರೆ ಯಾರಿಗೆ ತಾನೇ ಅಚ್ಚರಿಯಾಗದು? ವೈಜ್ಞಾನಿಕ ಪ್ರಗತಿ ಇದನ್ನು ಸಾಧ್ಯವಾಗಿಸಿದೆಯೆಂದಮೇಲೆ ಇಂದು ಜನಸಂಖ್ಯಾ ಸ್ಫೋಟದಿಂದ ಸಂಕೀರ್ಣಗೊಳ್ಳುತ್ತಿರುವ ಕೃಷಿಯೋಗ್ಯ ಭೂಪ್ರದೇಶವುಳ್ಳ ಭಾರತದಂತಹ ಹಲವಾರು ದೇಶಗಳು ಎದುರಿಸುತ್ತಿರುವ ಆಹಾರಾಭಾವ ಸಮಸ್ಯೆಗೆ ಈ ಕ್ರಮ ವರದಾನವೇ ಸರಿ. ಮಾನ್ಯ ಲೇಖಕರು ಪ್ರಸ್ತುತ ಲೇಖನದಲ್ಲಿ ಸವಿವರವಾಗಿ ಆ ಬಗ್ಗೆ ತಿಳಿಸಿ ಉಪಕರಿಸಿದ್ದಾರೆ.

ಸಸ್ಯಗಳು ಬೆಳೆಯಲು ಭೂಮಿ ಅತ್ಯಗತ್ಯವೆಂದೂ, ಮಣ್ಣಿಲ್ಲದಿದ್ದರೆ ಸಾಗುವಳಿ ಅಸಾಧ್ಯವೆಂದೂ ಸಾಮಾನ್ಯವಾಗಿ ಜನರ ಭಾವನೆ. ಆದರೆ ಮಣ್ಣು, ನೆಲಗಳಿಲ್ಲದೆಯೇ ಪೈರುಗಳನ್ನು ಬೆಳೆಸುವ ಕ್ರಮವು ಕಂಡುಹಿಡಿಯಲ್ಪಟ್ಟು ಪ್ರಚಾರದಲ್ಲಿದೆ.

ಭೂಮಿಯಮೇಲೆ ಬೆಳೆಯುವ ಗಿಡಗಳು ಭೂಮಿಯ ಮಣ್ಣನ್ನು ತಿಂದುಕೊಂಡು ಬೆಳೆಯುತ್ತವೆ ಎಂದು ಹಿಂದಿನ ಕಾಲದಲ್ಲಿ ಜನರು ತಿಳಿದಿದ್ದರು. ಗಿಡಗಳು ತಿನ್ನುವುದು ಮಣ್ಣನ್ನೇ ಅಥವಾ ಮಣ್ಣಿನಲ್ಲಿರುವ ರಾಸಾಯನಿಕ ವಸ್ತುಗಳನ್ನೇ ಎಂಬುದನ್ನು ಕಂಡುಹಿಡಿಯಲು ಪರಿಶೋಧಕರು ಅನೇಕ ವರ್ಷಗಳು ಶ್ರಮಿಸಿದರು. ಗಿಡಗಳು ಭೂಮಿಯಲ್ಲಿ ಬೆಳೆಯಲು ಮಣ್ಣಿನಲ್ಲಿ ಕೆಲವು ಧಾತುಗಳೂ, ಖನಿಜ ವಸ್ತುಗಳೂ, ಲವಣಗಳೂ ಅಗತ್ಯವಾಗಿರಬೇಕೆಂದೂ, ಸಸ್ಯಗಳು ಅವುಗಳನ್ನು ತಿಂದು ಬೆಳೆಯುತ್ತವೆಯೆಂದೂ ಜರ್ಮನಿಯ ರಸಾಯನ ಶಾಸ್ತ್ರಜ್ಞ ಜೂಸ್ಟಸ್ ವಾನ್ ಲೀಬಿಗ್ ಎಂಬಾತ 1840ರಲ್ಲಿ ತನ್ನ "Chemistry in its application to Agriculture and physiology" ಎಂಬ ಗ್ರಂಥದಲ್ಲಿ ಪ್ರಕಟಿಸಿದ.

ಸಸ್ಯಗಳು ಹುಲುಸಾಗಿ ಬೆಳೆಯಲು ಭೂಮಿಯಲ್ಲಿ ಯಾವ ಯಾವ ಪೌಷ್ಟಿಕ ಮೂಲವಸ್ತುಗಳಿರಬೇಕೆಂಬುದು ವಿಜ್ಞಾನಿಗಳಿಗೆ 1850ರ ಹೊತ್ತಿಗೆ ಸ್ಪಷ್ಟವಾಗಿ ತಿಳಿದು ಬಂದಿತು. ಅತ್ಯವಶ್ಯವಾದ ವಸ್ತುಗಳು: ಪೊಟಾಸಿಯಂ, ಕ್ಯಾಲ್ಸಿಯಂ, ಮೆಗ್ನೀಸಿಯಂ, ಯವಕ್ಷಾರಜನಕ (ನೈಟ್ರೋಜನ್), ರಂಜಕ (ಫಾಸ್ಫರಸ್), ಗಂಧಕಗಳು ಹೆಚ್ಚಾಗಿರಬೇಕು; ಬೋರಾನ್, ಮಾಲಿಬ್ಡಿನಂ, ಕಬ್ಬಿಣ, ಮ್ಯಾಂಗನೀಸ್ ತಾಮ್ರ, ಸತುವು (ಜಿಂಕ್) ಬಹು ಸ್ವಲ್ಪ ಪ್ರಮಾಣದಲ್ಲಿರಬೇಕು. ಸಸ್ಯಗಳು ಇಂಗಾಲ, ಜಲಜನಕ, ಆಮ್ಲಜನಕಗಳನ್ನು ವಾಯು ಮತ್ತು ಭೂಮಿಯ ನೀರಿನಿಂದ ಪಡೆಯುತ್ತವೆ. ಗಿಡಗಳ ಬೇರುಗಳು ಭೂಮಿಯಲ್ಲಿರುವ ತೇವವನ್ನು ಹೀರಿಕೊಂಡು ಅದರಲ್ಲಿರುವ ನಾನಾ ರಾಸಾಯನಿಕ ವಸ್ತುಗಳನ್ನು ತಮ್ಮ ಪೋಷಣೆಗೆ ಬಳಸಿಕೊಳ್ಳುತ್ತವೆ. ಈ ಧಾತುಗಳೂ, ರಾಸಾಯನಿಕ ದ್ರವ್ಯಗಳೂ ಭೂಮಿಯಲ್ಲಿ ಸಾಕಾದಷ್ಟು ಪ್ರಮಾಣಗಳಲ್ಲಿ ಇರಬೇಕಾದ್ದು ಅತ್ಯವಶ್ಯಕ.

ಈ ರಾಸಾಯನಿಕ ವಸ್ತುಗಳನ್ನು ಗಿಡಗಳಿಗೆ ಭೂಮಿಯ ಮೂಲಕವಲ್ಲದೆ ಬೇರೆ ರೀತಿಯಲ್ಲಿ ಒದಗಿಸಿದರೂ ಅವು ಬೆಳೆಯುತ್ತವೆಯೇ ಎಂಬುದನ್ನು ಕೆಲವು ಶೋಧಕರು ಪರೀಕ್ಷಿಸಿದರು. ಸಿಟ್ಜರ್ಲೆಂಡಿನ ವಿಜ್ಞಾನಿ ಡಿ ಸಾಸುರೆ ಎಂಬಾತ ನಾನಾ ಲವಣಗಳನ್ನು ನೀರಿನಲ್ಲಿ ಕರಗಿಸಿ, ಆ ದ್ರಾವಣದಲ್ಲಿ ಸಸ್ಯಗಳ

ಸಾಗುವಳಿಯನ್ನು ಅನ್ವೇಷಿಸಿ, ಗಿಡಗಳು ಆ ಧಾತು, ಲವಣಗಳನ್ನು ಹೀರಿಕೊಂಡು ಬೆಳೆಯುತ್ತವೆಯೆಂದು ಖಾತ್ರಿ ಪಡಿಸಿದ. ಫ್ರೆಂಚ್ ವಿಜ್ಞಾನಿ ಜೀನ್ ಬೌಸಿಂಗ್ವಾಲ್ ಎಂಬುವನು ಸಸ್ಯಗಳನ್ನು ನೀರಿನಲ್ಲಿ ಕರಗದ ಮರಳು, ಜಲ್ಲಿ ಬೆಣಚು ಕಲ್ಲುಗಳ ಕೃತಕ ಭೂಮಿಯಲ್ಲಿ ಭದ್ರವಾಗಿ ನೆಟ್ಟು ಅವುಗಳಿಗೆ ಅವಶ್ಯವಾದ ಪೌಷ್ಠಿಕ ವಸ್ತುಗಳನ್ನು ಸರಿಯಾದ ಪ್ರಮಾಣಗಳಲ್ಲಿ ನೀರಿನಲ್ಲಿ ಕರಗಿಸಿ ಹಾಕಿ ನಾನಾ ಬಗೆಯ ಗಿಡಗಳನ್ನು ಬೆಳೆಸಿದ. ಜರ್ಮನ್ ಸಂಶೋಧಕ ಜೂಲಿಯಸ್ ವಾನ್ ಸಾಚ್ಸ್ ಎಂಬಾತ ಘನ ವಸ್ತುಗಳ ಮಾಧ್ಯಮವನ್ನು ಸಂಪೂರ್ಣವಾಗಿ ವರ್ಜಿಸಿ ಧಾತು ಲವಣಗಳು ಕರಗಿದ ನೀರಿನಲ್ಲೇ ಗಿಡಗಳನ್ನು ಹುಲುಸಾಗಿ ಬೆಳೆಸಿದ.

ಈ ರೀತಿ ದ್ರಾವಕದಲ್ಲಿ ಸಾಗುವಳಿ ಮಾಡುವ ವಿಧಾನವು ಸುಮಾರು 1806 ರ ಹೊತ್ತಿಗೆ ಪ್ರಗತಿ ಹೊಂದಿತು. ವಾನ್ ಸಾಚ್ಸ್ ಬೀಜಗಳನ್ನು ಕಟ್ಟಿಗೆಪುಡಿ ತುಂಬಿದ ಮಡಕೆಯಲ್ಲಿ ಮೊಳೆಯುವಂತೆ ಮಾಡಿ, ಸಸಿಗಳು ಕಿತ್ತು ನೆಡುವುದಕ್ಕೆ ತಯಾರಾದಾಗ ಅವುಗಳಲ್ಲಿ ಪ್ರತಿಯೊಂದನ್ನೂ ತೂತು ಕೊರೆದ ಕಾರ್ಕ್‌ನಲ್ಲಿ ನೆಟ್ಟು ಆ ಸಸಿಯ ಬೇರುಗಳು ಲವಣಗಳ ದ್ರವದೊಳಗೆ ಮುಳುಗಿರುವಂತೆ ಏರ್ಪಡಿಸಿದ. ಕ್ಯಾಲಿಫೋರ್ನಿಯದ ಡಾ|| ವಿಲಿಯಂ ಗೆರಿಕ್ ಎಂಬ ವಿಜ್ಞಾನಿ ಈ ಕ್ಷೇತ್ರದಲ್ಲಿ ನಾನಾ ಪರಿಶೋಧನೆಗಳನ್ನು ನಡೆಸಿ ಇದು ಅತಿ ಶ್ರೇಷ್ಠ ಕ್ರಮವೆಂದು ಪ್ರಮಾಣಪಡಿಸಿದ. ಈ ಪರಿಶೋಧನೆಗಳಿಂದ ಸಸ್ಯ ಶಾಸ್ತ್ರದಲ್ಲಿ ಹೊಸದೊಂದು ಶಾಖೆಯು ಆರಂಭವಾಯಿತು. ಈ ವೈಜ್ಞಾನಿಕ ಅಂಗಕ್ಕೆ "ಹೈಡ್ರೋಪೋನಿಕ್ಸ್" ಎಂದು ಹೆಸರು. ಗ್ರೀಕ್ ಭಾಷೆಯ ಈ ಶಬ್ದಕ್ಕೆ "ನೀರಿನಲ್ಲಿ ಪರಿಶ್ರಮ" (Labour of water) ಎಂದು ಅರ್ಥ. ಈ ಕ್ರಮದಲ್ಲಿ ಮಣ್ಣಿಲ್ಲದೆ ಸಾಗುವಳಿ ಮಾಡುವುದರಿಂದ ಇದಕ್ಕೆ "ಮಣ್ಣಿಲ್ಲದ ಕೃಷಿ" (Soilless agriculture) ಎಂಬ ಹೆಸರೂ ಇದೆ. ಪೌಷ್ಠಿಕ ವಸ್ತುಗಳನ್ನು ನೀರಿನಲ್ಲಿ ಕರಗಿಸಿ ವ್ಯವಸಾಯ ಮಾಡುವುದರಿಂದ ಈ ವಿಧಾನಕ್ಕೆ "ನ್ಯೂಟ್ರಿಕಲ್ಚರ್" ಎಂದೂ ಹೆಸರು.

ಈ ಕಲೆಯಲ್ಲಿ ಸಬ್-ಇರಿಗೇಷನ್ ಎಂಬ ಶ್ರೇಷ್ಠ ವಿಧಾನವೂ ಪ್ರಚಾರದಲ್ಲಿದೆ. ಇದರಲ್ಲಿ ಸಸ್ಯದ ಬೇರುಗಳನ್ನು ಬೆಣಚುಕಲ್ಲುಗಳ ಸಂದಿಗಳಲ್ಲಿ ನೆಟ್ಟು, ಲವಣ, ಧಾತುಗಳನ್ನು ದ್ರವರೂಪದಲ್ಲಿ ಪದೇ ಪದೇ ಆ ಕಲ್ಲುಗಳಿಗೆ ಪಂಪ್‌ಮಾಡಲಾಗುತ್ತದೆ. ಹೆಚ್ಚಾದ ದ್ರವವು ನಿಧಾನವಾಗಿ ಹರಿಯುತ್ತಾ ಹಿಂದಿಟ್ಟಿರುವ ಟ್ಯಾಂಕಿನೊಳಗೆ ಹೋಗಿ ಸೇರಿಕೊಳ್ಳುತ್ತದೆ. ಈ ಕ್ರಮದಲ್ಲಿ ದ್ರವದಲ್ಲಿರುವ ಖನಿಜ ವಸ್ತುಗಳ ನಿಖರ ಪ್ರಮಾಣ ಕ್ರಮೇಣ ವ್ಯತ್ಯಾಸವಾಗುತ್ತಾ ಹೋಗುವುದರಿಂದ, ಆ ಧಾತುಗಳ ಪ್ರಮಾಣಗಳನ್ನು ಪದೇ ಪದೇ ವಿಚ್ಛೇದಿಸುತ್ತಾ ಪ್ರಮಾಣಗಳನ್ನು ಕ್ರಮಪಡಿಸಿ ವ್ಯವಸ್ಥೆಯಲ್ಲಿಡಲು ಬೇಕಾದ ಲವಣಗಳನ್ನು ಅವಶ್ಯವಿದ್ದಂತೆ ಸೇರಿಸುತ್ತಿರಬೇಕು. ಬಹು ಸೂಕ್ಷ್ಮ ಪ್ರಮಾಣದಲ್ಲಿರುವ ಕೆಲವು ಧಾತುಗಳು ದ್ರಾವಕದ ಹತ್ತು ಲಕ್ಷ ಭಾಗಗಳಲ್ಲಿ ಒಂದು ಭಾಗದಷ್ಟು ಮಾತ್ರ ಇರುವುದರಿಂದ ಅವುಗಳ ವಿಭಜನೆಯನ್ನು ಅತ್ಯಂತ ಜಾಗರೂಕತೆಯಿಂದ ಮಾಡಬೇಕು.

ಪೌಷ್ಠಿಕ ವಸ್ತುಗಳು ಬೇರೆ ಬೇರೆ ಜಾತಿಯ ಗಿಡಗಳಿಗೆ ಬೇರೆ ಬೇರೆ ಪ್ರಮಾಣಗಳಲ್ಲಿ ಬೇಕಾಗುತ್ತವೆ. ಆದ್ದರಿಂದ ದ್ರಾವಕಕ್ಕೆ ಸೇರಿಸಬೇಕಾದ ಧಾತುಗಳ ಮಿಶ್ರಣವು ಆಯಾ ಜಾತಿಯ ಗಿಡಗಳಿಗೆ ತಕ್ಕಂತೆ ಬೇರೆ ಬೇರೆ ಪ್ರಮಾಣಗಳಲ್ಲಿರಬೇಕು. ಬೇರೆ ಬೇರೆ ಋತುಗಳು ಹವಾಮಾನಗಳು ಮತ್ತು ಸಸ್ಯದ ಬೇರೆ ಬೇರೆ ಭಾಗಗಳು—ಇವುಗಳಿಗೆ ತಕ್ಕಂತೆ ಈ ಧಾತುಗಳ ಪ್ರಮಾಣಗಳನ್ನು ಆಗಾಗ್ಗೆ ಬೇರೆ ಬೇರೆ ರೀತಿಗಳಲ್ಲಿ ಬದಲಿಸಬೇಕಾಗುತ್ತದೆ. ಒಂದೇ ಜಾತಿಯ ಗಿಡದಲ್ಲೂ ಸಹ ಈ ಪರಿಮಾಣಗಳು ಆಗಾಗ್ಗೆ ವರ್ಷದ ಬೇರೆ ಬೇರೆ ಕಾಲಗಳಲ್ಲಿ ಬದಲಾಗುತ್ತವೆ. ಟೊಮ್ಯಾಟೋ ಗಿಡ ಹುಲುಸಾಗಿ ಬೆಳೆಯಲು ಅದಕ್ಕೆ ಬೇಕಾದ ಪೊಟಾಸಿಯಂ, ಯವಕ್ಷಾರಜನಕ ಮತ್ತು ರಂಜಕಗಳನ್ನು ಬೇರೆ ಬೇರೆ ಕಾಲಗಳಲ್ಲಿ ಬೇರೆ ಬೇರೆ ಪ್ರಮಾಣಗಳಲ್ಲಿ ಒದಗಿಸಬೇಕು.

ಕೋಳಿಮೊಟ್ಟೆಗಳನ್ನು "ಇನ್‌ಕ್ಯುಬೇಟರ್" ನೊಳಗಿಟ್ಟು ಅವುಗಳಿಗೆ ಬೇಕಾದ ಶಾಖ, ಬೆಳಕು ಕೊಟ್ಟು ಮರಿ ಮಾಡಿಸುವಂತೆ, ಬೀಜಗಳನ್ನು ಹೈಡ್ರೋಪೋನಿಕ್ ವ್ಯವಸ್ಥಾಪಕವಿರುವ ಕೋಣೆ

ಗಳೊಳಗಿಟ್ಟು ಸಸ್ಯಾಭಿವೃದ್ಧಿ ಮಾಡಬಹುದು. ಇದನ್ನು ಮನೆಗಳಲ್ಲಿ ರೆಫ್ರಿಜಿರೇಟರ್‌ನಂತೆಯೇ ಉಳ ವಡಿಸಬಹುದು. ಇವರಲ್ಲಿ ಬೆಳಕು, ಗಾಳಿ, ಶಾಖ ಮುಂತಾದವುಗಳ ವ್ಯವಸ್ಥೆಯೂ, ಹೊರಗೂ ಒಳಗೂ ಎಳೆದು ತಳ್ಳಬಹುದಾದ ತಟ್ಟೆಗಳ ರೀತಿಯ ಅಂತಸ್ತು ಇವೆ. ಬೇರಾಗಿರುವ ಸಸ್ಯದ ಬೀಜಗಳನ್ನು ತಟ್ಟೆ ಗಳೊಳಗೆ ಹರಡಿ, ನೀರು, ಅಮೋನಿಯಂ ಸಲ್ಫೇಟ್, ಕಬ್ಬಿಣದ ಸಲ್ಫೇಟ್, ಮೆಗ್ನೀಷಿಯಂ ಸಲ್ಫೇಟ್, ಪೊಟಾಷಿಯಂ ಸಲ್ಫೇಟ್ ಮುಂತಾದುವುಗಳ ಮಿಶ್ರಣ ವನ್ನು ಕೊಳವೆಗಳ ಮೂಲಕ ಹಾಯಿಸಲಾಗುತ್ತದೆ. ಬೀಜಗಳು ಮೊಳಕೆಯೊಡೆದು ಬೆಳೆಯುತೊಡಗುತ್ತವೆ. ದಿನಕ್ಕೊಂದು ಅಂತಸ್ತಿಗೆ ಬೀಜಗಳಿರುವ ತಟ್ಟೆ ಗಳನ್ನು ಅಣಿ ಮಾಡಿದರೆ, ಒಂದು ಫಸಲು ಮುಗಿ ಯುವ ಹೊತ್ತಿಗೆ ಇನ್ನೊಂದು ಅಣಿಯಾಗಿರುತ್ತದೆ. ಹೊರಗಿನ ವಾತಾವರಣ ಹೇಗೇ ಇರಲಿ ಫಸಲು ಸದಾ ಒಂದೇ ರೀತಿ, ಒಂದೇ ಪ್ರಮಾಣದಲ್ಲಿರುತ್ತದೆ.

ಹೈಡ್ರೋಪೋನಿಕ್ ಕ್ರಮದಲ್ಲಿ ಸೌತೇಕಾಯಿ, ಟೊಮೇಟೋ ಹೂವಿನಗಿಡಗಳು, ಕೊತ್ತಂಬರಿ, ನಾನಾ ಬಗೆಯ ಸೊಪ್ಪುಗಳು, ಭತ್ತ, ಗೋಧಿ, ಓಟ್ಸ್, ನವಣೆ, ಬಾರ್ಲಿ, ಮೂಲಂಗಿ, ಬೀಟ್‌ರೂಟ್, ಆಲೂ ಗೆಡ್ಡೆ, ಗೆಣಸು, ಈರುಳ್ಳಿ, ಬೆಳ್ಳುಳ್ಳಿ, ಬದನೆ, ಕುಂಬಳ ಇತ್ಯಾದಿಗಳನ್ನು ಬೆಳೆಯಬಹುದು ಟೊಮೇಟೋ, ಅನಾನಸ್‌ಗಳು ಹೆಚ್ಚು ರಸವತ್ತಾಗಿರುತ್ತವೆ. ಈ ತರಕಾರಿ ಹಣ್ಣುಗಳಲ್ಲಿ ಭೂಮಿಯಲ್ಲಿ ಬೆಳೆದವುಗಳ ಗಿಂತ ಎರಡರಷ್ಟು ವಿಟಮಿನ್‌ಗಳಿರುತ್ತವೆ. ಈ ಕ್ರಮದಲ್ಲಿ ಬೆಳೆದ ಒಂದೊಂದು ಟೊಮೇಟೋ ಗಿಡವೂ 30 ಪೌಂಡು ಹಣ್ಣು ಕೊಡುತ್ತದೆ; ಇದು ಭೂಮಿಯ ಒಂದು ಎಕರೆಯಲ್ಲಿ ಬೆಳೆದ ಬಹಳ ಟೊಮೇಟೋಗಳಿಗೆ ಸಮ. ಈ ಕ್ರಮದಲ್ಲಿ ಬೆಳೆದ ಹುಲ್ಲು ದನಕರುಗಳಿಗೆ ಹೆಚ್ಚು ಪೌಷ್ಟಿಕ. ಒಂದು ವರ್ಷಕ್ಕಾಗುವಷ್ಟು ಶ್ರೇಷ್ಠ ಹುಲ್ಲನ್ನು ಬೆಳೆಯ ಬಹುದು. ಅರ್ಧ ಟನ್ ಹುಲ್ಲನ್ನು ಒಂದು ವಾರ ದಲ್ಲಿ ಬೆಳೆಸಲು ಸಾಧ್ಯ. ಒಂದೊಂದು ತಟ್ಟೆಯಲ್ಲೂ 50 ದನಕರುಗಳಿಗೆ ಸಾಕಾಗುವಷ್ಟು ಹುಲ್ಲನ್ನು ಬೆಳೆಯಬಹುದು. ಲೆಟ್ಯೂಸ್ ಸೊಪ್ಪು ಬಹು ಶೀಘ್ರ ಬೆಳೆಯುತ್ತದೆ.

ಕ್ಯಾಲಿಫೋರ್ನಿಯಾ ವಿಶ್ವವಿದ್ಯಾನಿಲಯದ ಪ್ರೊಫೆಸರ್ ಗೆರಿಕ್ ಎಂಬಾತ ಅನೇಕ ಪರಿಶೋಧನೆ ಗಳನ್ನು ನಡೆಸಿದ. 1926 ರಲ್ಲಿ 25 ಅಡಿಗಳೆತ್ತರಕ್ಕೆ ಹಬ್ಬಿದ ಟೊಮೇಟೋ ಬಳ್ಳಿಗಳನ್ನು ಹೈಡ್ರೋ ಪೋನಿಕ್ ಕ್ರಮದಿಂದ ಬೆಳೆಸಿದ. $\frac{1}{100}$ ಎಕರೆಯಲ್ಲಿ ಅವನು ಹೊಸ ತಂತ್ರದಿಂದ 12,226 ಪೌಂಡು ಟೊಮೇಟೋಗಳನ್ನು ಉತ್ಪತ್ತಿ ಮಾಡಿದ. ಅಷ್ಟೇ ಜಾಗದಲ್ಲಿ ಅವನು 250 ಪೌಂಡು ಆಲೂಗೆಡ್ಡೆ ಯನ್ನೂ, ಸೆಲರಿಯ 100 ಕಾಂಡಗಳನ್ನೂ ಬೆಳೆಸಿದ

"ಭೂಮಿ ಮಣ್ಣುಗಳಿಲ್ಲದ ತೋಟಗಳು" ನಿರ್ಮಿತವಾಗಿವೆ. ಅಮೇರಿಕ ಸರ್ಕಾರದವರು ದ್ವಿತೀಯ ಮಹಾಯುದ್ಧ ಕಾಲದಲ್ಲಿ ಶಾಂತಸಾಗರದ ಬಂಜರು ಭೂಮಿಯ ದ್ವೀಪಗಳಲ್ಲಿ ಬಿಡಾರ ಹೂಡಿದ್ದ ತಮ್ಮ ಸೈನಿಕರಿಗೆ ತಾಜಾ ತರಕಾರಿಗಳನ್ನು ಒದಗಿಸಲು "ಮಣ್ಣಿಲ್ಲದ ತೋಟಗಳನ್ನು" ಬಹುಮಟ್ಟಿಗೆ ಉಪ ಯೋಗಿಸುತ್ತಿದ್ದರು. ಗಣಿಗಳಲ್ಲಿ ಕೆಲಸ ಮಾಡುವ ಮತ್ತು ಇತರ ಕಷ್ಟಜೀವಿಗಳಿಗೆ ಅಲ್ಲಿಯೇ ಆಗತಾನೆ ಬೆಳೆದ ಆಹಾರವನ್ನೊದಗಿಸಲು ಈ ಹೊಸಕಲೆಯು ಬಹಳ ನೆರವಾಗಿದೆ. [25 ನೇ ಪುಟ ನೋಡಿ]

---

[13 ನೇ ಪುಟದಿಂದ]

ಆದರೂ ಅವನ ಸಂಗಡಿಗರು ಎಡಬಿಡದೆ ದುಡಿದರು. ಉಳಿದಿದ್ದ ಸೂಕ್ಷ್ಮ ತಾಂತ್ರಿಕ ಕೆಲಸ ಗಳನ್ನು ಜೇನ್ಸ್ ಬರೆದಿರಿಸಿದ್ದ ಚಿತ್ರಗಳ ನಿಶ್ಚಿತ ಆಧಾರದಿಂದ 10 ವರ್ಷಗಳಲ್ಲಿ ಅದನ್ನು ಪೂರ್ಣ ಗೊಳಿಸಿದರು. ಅದಕ್ಕೆ ಕೋಪನ್‌ಹೇಗನ್ ನಗರ ಸಭೆಯು ಧನಸಹಾಯವನ್ನು ಒದಗಿಸಿತು. ಅಂತೂ ಒಂದೇ ಲಂಬಕದ ಮೇಲೆ 12 ಗಡಿಯಾರಗಳು ತಲೆಯೆತ್ತಿದವು. ಈ ಕಾರ್ಯಕ್ಕಾಗಿ 40 ವರ್ಷ ಗಳು ಬೇಕಾದುವು.

ಈ ಗಡಿಯಾರದಲ್ಲಿ ಹದಿನೈದು ಸಾವಿರ ಬಿಡಿಭಾಗಗಳಿವೆ. ಇದರ ತಯಾರಿಕೆಗೆ 50,00,000 ರೂಪಾಯಿಗಳ ವೆಚ್ಚ ತಗುಲಿದೆ. ಕೋಪನ್ ಹೇಗನ್‌ಗೆ ಹೋಗುವ ಪ್ರತಿಯೊಬ್ಬ ಪ್ರವಾಸಿಗೂ ಇದೊಂದು ವಿಶೇಷ ಆಕರ್ಷಣೆಯಾಗಿದೆ. ●

# ಬಲಿದಾನ

— ಸುಬ್ರಾಯ ಅಡಿಗ.

ಅಸ್ಮರ ಉಳಿವಿಗಾಗಿ ತನ್ನ ಅಳಿವನ್ನೂ ಲೆಕ್ಕಿಸದ ಲೆಕ್ಕವಿಲ್ಲದಷ್ಟು ಮಂದಿ ಮಹಾತ್ಮರು ಆಗಿ ಹೋಗಿದ್ದಾರೆ. ಅವರ ತ್ಯಾಗ - ಬಲಿದಾನಗಳು ಮಾನವೀಯ ಮೌಲ್ಯಗಳ ಜೀವಂತ ಸಾಕ್ಷಿಗಳಾಗಿವೆ. ಪ್ರಸ್ತುತ ಲೇಖನದಲ್ಲಿ ಲೇಖಕರು ಐದಾರು ನಿದರ್ಶನಗಳ ಮೂಲಕ ಬಲಿದಾನದ ಮಹತ್ವವನ್ನು ಎತ್ತಿ ತೋರಿಸಿ ಓದುಗರಲ್ಲಿ ಬಲಿದಾನದ ಪ್ರಜ್ಞೆ ಮೂಡಿಸುವಲ್ಲಿ ಉಪಕಾರವೆಸಗಿದ್ದಾರೆ.

—ಸಂ

ಶತ್ರುಸೇನೆಯಿಂದ ಆವೃತನಾದ ಸ್ಪೇನ್‌ದ ಬಾದಶಾಹ ಅಲ್ಫಾಸೋ ತನ್ನ ರಾಜಧಾನಿಯ ರಕ್ಷಣೆಗಾಗಿ ಜೀವಟ ಹಂಗುತೊರೆದು ಪ್ರಯತ್ನಿಸುತ್ತಿದ್ದ ಅವನ ಮಗ ಶತ್ರುಗಳ ಕೈಗೆ ಸಿಕ್ಕಿಬಿದ್ದ.

ಶತ್ರುಸುಲ್ತಾನ ಒಂದು ಎತ್ತರದ ಸ್ಥಾನದಲ್ಲಿ ಗಲ್ಲಿನ ಏರ್ಪಾಡುಮಾಡಿ — 'ರಾಜಧಾನಿ ಹಾಗೂ ಮಗ ಈ ಎರಡರಲ್ಲಿ ಯಾವುದನ್ನು ಬೇಕಾದರೂ ರಕ್ಷಿಸಬಹುದು.'! ಎಂದು ಬಾದಶಹ ಅಲ್ಫಾಸೋನಿಗೆ ಹೇಳಿಕಳುಹಿಸಿದ.

ಈ ಸಂದೇಶದಿಂದ ದರಬಾರು ಸ್ತಬ್ಧವಾಯಿತು. ಎಲ್ಲರ ದೃಷ್ಟಿಗಳೂ ಬಾದಶಹನ ಮುಖದ ಮೇಲೆಯೇ ನಟ್ಟಿದ್ದವು. ಆದರೆ ತೀರ್ಮಾನ ಕೈಗೊಳ್ಳಲು ಅವನಿಗೇನೂ ಕಷ್ಟವಾಗಲಿಲ್ಲ. 'ನನಗೆ ನನ್ನ ಮಗನ ಬಲಿದಾನ ಒಪ್ಪಿಗೆ .... ನನ್ನ ಪ್ರಜೆ ಬದುಕುವಂತಾಗಲಿ" — ಎಂದು ಸಂದೇಶ ಕಳುಹಿದ.

ಬಲಿದಾನ ಅಥವಾ ಉತ್ಸರ್ಗ ಯಾವುದಾದರೂ ಉಚ್ಚ ಧ್ಯೇಯಕ್ಕಾಗಿ ಮಾಡುವಂತಹ ಪ್ರಿಯ ವಸ್ತುವಿನ ಪರಿತ್ಯಾಗ. ಆದರೆ ಈ ತ್ಯಾಗ ಪ್ರತಿಫಲದ ಆಶೆಯಿಂದ ನಡೆದಿರಬಾರದು. ಆಗ ಅದು ಇನ್‌ವೆಸ್ಟ್‌ಮೆಂಟ್ ಎನ್ನಿಸುತ್ತದೆ.

ಮೊದಲನೇ ಎಲಿಜಾಬೆಥ್ ಮಹಾರಾಣಿಯ ರಾಜಸಭೆಯ ರತ್ನ ಹಾಗೂ ಲೇಖಕಯೋದ್ಧನಾದ ಸರ್ ಫಿಲಿಪ್ ಯುದ್ಧದಲ್ಲಿ ಭಯಂಕರ ಗಾಯಗೊಂಡು ಬಿದ್ದಿದ್ದ. ತಾನಿನ್ನು ಹೆಚ್ಚು ಸಮಯ ಬದುಕಲಾರೆನೆಂದೂ ಅವನಿಗೆ ಮನದಟ್ಟಾಗಿತ್ತು. ಆಗ ಅನುಚರನು ತುಂಬ ಪ್ರಯತ್ನಪಟ್ಟು ಎಲ್ಲಿಂದಲೋ ಒಂದು ಬಟ್ಟಲು ನೀರು ತಂದ. ಆಗಲೇ ಹತ್ತಿರವೇ ಬಿದ್ದಿದ್ದ ಸಾಮಾನ್ಯ ಸಿಪಾಯಿಯೊಬ್ಬ ....'ನೀರು ಒಂದು ಗುಟಕು ನೀರು !' —ಎಂದು ನರಳಿ ನುಡಿದ.

ಸರ್ ಫಿಲಿಪ್ ಆ ನೀರನ್ನು ಅವನಿಗೆ ಕುಡಿಸುತ್ತ— 'ತಮ್ಮಾ.... ನಿನಗೆ ಇದರ ಅಗತ್ಯ ಹೆಚ್ಚಿದೆ' ಎಂದ. ತುಸು ಹೊತ್ತಿನ ಮೇಲೆ ಸ್ವತಃ ಬಾಯಾರಿಯೇ ಆತ ಮೃತನಾದ.

'ಆತ್ಮರಕ್ಷಣೆ ಪ್ರಕೃತಿಯ ಮೊದಲ ಕಾನೂನ. ಆದರೆ ಆತ್ಮೋತ್ಸರ್ಗ ದೈವೀಕೃಪೆಯ ಸರ್ವಶ್ರೇಷ್ಠ ನಿಯಮ "—ಎಂಬ ಆಂಗ್ಲ ಸೂಕ್ತಿ ಸರ್ ಫಿಲಿಪ್‌ನನ್ನೇ ಗಮನದಲ್ಲಿರಿಸಿ ರಚಿತವಾಗಿರಬಹುದು.

ಈ ಸರ್ವಶ್ರೇಷ್ಠ ನಿಯಮದ ನಿಷ್ಠಾವಂತ ಪಾಲಕನೆಂದರೆ ಫಾದರ್ ದಾಮಿಯನ್. ಆತ ತಾರುಣ್ಯದಲ್ಲೇ ತನ್ನ ದೇಶ ಫ್ರಾನ್ಸ್‌ನ್ನು ತ್ಯಜಿಸಿ ಬಹುದೂರದ ಮೊಲೊಕಾಯಿ ದ್ವೀಪದಲ್ಲಿರುವ ಕುಷ್ಠರೋಗಿಗಳ ಸೇವೆಗೈಯಲು ಹೊರಟು ಹೋಗಿದ್ದ. ಹಲವಾರು ವರ್ಷಗಳವರೆಗೆ ಅವನು ಅವರ ಸೇವೆ ಮಾಡಿದ. ಆ ರೋಗಿಗಳು ಅವನನ್ನು ತುಂಬ ಪ್ರೀತಿಸುತ್ತಿದ್ದರು. ಆದರೂ ತನ್ನ ಆರೋಗ್ಯಸ್ಥಿತಿಯಿಂದಾಗಿ ಅವರೆಲ್ಲ ತನ್ನನ್ನು ಸ್ವಲ್ಪಮಟ್ಟಿಗೆ ಬೇರೆಯುವನೆಂದು ಭಾವಿಸುತ್ತಾರೆಂಬ ಕೊರಗೂ ಅವನಿಗಿತ್ತು.

ಈ ಅಂತರವನ್ನು ಅಳಿಸುವುದಕ್ಕಾಗಿ ಫಾದರ್ ದಾಮಿಯೆನ್ ತಿಳಿತಿಳಿದೇ ಕುಷ್ಠರೋಗವನ್ನು ಸ್ವೀಕರಿಸಿದ. ತನ್ನನ್ನು ರೋಗವು ಪೂರ್ತಿಯಾಗಿ ಆಕ್ರಮಿಸಿತೆಂದು ಮನದಟ್ಟಾದಾಗ ಆತ ಮುಂದಿನ

ರವಿವಾರ ಇಗರ್ಜಿಯಲ್ಲಿ ಕುಷ್ಠರೋಗಿಗಳೆದುರು ತನ್ನ ಪ್ರವಚನವನ್ನು. 'ಕುಷ್ಠರೋಗಿಗಳಾದ ನಾವು....' ಎಂದೇ ಆರಂಭಿಸಿದ ಅದನ್ನು ಕೇಳುತ್ತಲೇ ರೋಗಿಗಳು ನಿಬ್ಬೆರಗಾದರು. ಫಾದರ್ ದಾಮಿಯನ್ ತಮ್ಮಲ್ಲೇ ಒಬ್ಬರೆಂದು ಅವರಿಗೆ ಖಚಿತವಾಯಿತು.

'ದೊಡ್ಡ ದೊಡ್ಡ ವಸ್ತುಗಳನ್ನೇನೋ ನಾವು ತ್ಯಜಿಸಬಲ್ಲೆವು. ಆದರೆ ಸಣ್ಣ ಸಣ್ಣ ವಸ್ತುಗಳ ಬಲಿದಾದನಲ್ಲೇ ನಾವು ಹಿಂದೆ ಸರಿಯುತ್ತೇವೆ! ಎಂದು ಕವಿ ಗಯಟೇ ಹೇಳಿದ್ದಾರೆ.

ಕಾಕಾ ಕಾಲೇಲ್ಕರ್ ಒಂದು ದಿನ ಯಾವುದೋ ಪುಸ್ತಕ ಓದುವುದರಲ್ಲಿ ಮಗ್ನರಾಗಿದ್ದರು. 'ಏನು ಓದುತ್ತಿರುವಿ ? '— ಕೇಳಿದರು ಗಾಂಧೀಜಿ. ''ಉಮರ್ ಖಯ್ಯಾಮ್‌ನ ರುಬಾಯಿಗಳು ............ ಫಿಟ್ಸ್‌ಜೆರಲ್ಡ್ ಮಾಡಿದ ಇಂಗ್ಲಿಷ್ ಅನುವಾದ " ಓ! ಹಿಂದೊಮ್ಮೆ ನನಗೂ ಆಂಗ್ಲ ಕವಿತೆಗಳನ್ನೋದುವ ಹವ್ಯಾಸವಿತ್ತು. ಆದರೆ ನಾನದನ್ನು ಬರಬರುತ್ತಾ ಬಿಟ್ಟುಬಿಟ್ಟೆ. ದೇಶಸೇವೆಗಾಗಿ ನಾನು ಮಾಡಿದ ನಿಜವಾದ ತ್ಯಾಗವೆಂದರೆ ಇಂಗ್ಲಿಷ್ ಸಾಹಿತ್ಯ ಓದುವ ಹವ್ಯಾಸ! ಸಂಪತ್ತನ್ನು ನಾನೆಂದೂ ಲಕ್ಷಿಸಲಿಲ್ಲ; ಹೀಗಾಗಿ ಅದನ್ನು ತ್ಯಜಿಸುವುದೇನೂ ಕಷ್ಟವಾಗಲಿಲ್ಲಿ. ಆದರೆ ಆಂಗ್ಲ ಸಾಹಿತ್ಯವನ್ನು ತ್ಯಜಿಸುವುದು ತುಂಬ ಕಷ್ಟವಾಯಿತು. ಆದರೂ ನಾನು ಅದನ್ನು ತ್ಯಜಿಸಲು ನಿರ್ಧರಿಸಿದೆ.— ಇದು ಗಾಂಧೀಜಿಯವರ ತ್ಯಾಗ.

ಆದರೆ ಬಲಿದಾನದ ಪೇಟೆಯಲ್ಲಿ ಸಣ್ಣ ಸಣ್ಣ ನಾಣ್ಯಗಳನ್ನು ಹಿಡಿದು ಸಾಗಿದರೆ ಫಲವಿಲ್ಲ. ಅಲ್ಲಿ ಕೆಲವೊಮ್ಮೆ ಬಹುದೊಡ್ಡ ಮೊತ್ತವನ್ನು ಪಣವೊಡ್ಡಬೇಕಾಗುತ್ತದೆ.

ಶತ್ರುಗಳು ಎಥೆನ್ಸ್‌ನ್ನು ಸುತ್ತುವರಿದಿದ್ದರು. ಅವರಿಗೆ ತಮ್ಮ ವಿಜಯದ ಪೂರ್ಣ ಭರವಸೆಯಿತ್ತು. 'ಒಂದೋ ಎಥೆನ್ಸ್ ನಾಶವಾಗುವುದು; ಇಲ್ಲವೇ ಅದರ ರಾಜನಾದ ಕೊಡೋರಸ್ ನಾಶಹೊಂದುವ!' ಎಂಬ ಭವಿಷ್ಯವಾಣಿಯನ್ನು ಅವರು ಕೇಳಿದ್ದರು. ಈ ಭವಿಷ್ಯವಾಣಿ ಎಥೆನ್ಸ್‌ವಾಸಿಗಳಿಗೂ ತಿಳಿದಿತ್ತು. ಅವರು ತಮ್ಮ ನಗರರಕ್ಷಣೆಗೆ ಜೀವದ ಹಂಗುತೊರೆದು ಹೋರಾಡುತ್ತಿದ್ದರು.

ಒಂದು ರಾತ್ರಿ ಎಥೆನ್ಸ್‌ದ ರೈತನೊಬ್ಬ ಶತ್ರುಶಿಬಿರಕ್ಕೆ ನುಗ್ಗಿ ಒಬ್ಬ ಸಿಪಾಯಿಯೊಡನೆ ಬಲಾತ್ಕಾರವಾಗಿ ಕಾದತೊಡಗಿದ. ಸಿಪಾಯಿ ಖಡ್ಗದಿಂದ ಅವನನ್ನು ಕೊಂದುಹಾಕಿದ. ಆ ರೈತನೇ ರಾಜ ಕೊಡೋರಸ್ ಎಂಬುದು ಮತ್ತೆ ಬೆಳಕಿಗೆ ಬಂತು.

ತಮ್ಮ ರಾಜ ಸತ್ತ ಸುದ್ದಿ ಕೇಳಿ ಎಥೆನ್ಸ್ ಸೈನಿಕರು ಗಾಬರಿಯಾದರು. ಆದರೆ ಯಾರೋ ಆ ಭವಿಷ್ಯವಾಣಿಯ ನೆನಪು ಮಾಡಿದರು. ' ಈಗ ನಮ್ಮ ರಾಜ ಸತ್ತಿರುವುದರಿಂದ ನಾವು ಖಂಡಿತ ಗೆಲ್ಲುತ್ತೇವೆ " ಎಂದೂ ಆ ಮನುಷ್ಯ ಸೂಚಿಸಿದ.

ಇದರಿಂದ ಸೈನಿಕರಿಗೆ ಹೊಸ ಉತ್ಸಾಹ ಉಂಟಾಯಿತು. ಅವರು ಜೀವದಾಸೆ ತೊರೆದು ಹೋರಾಡಿ ಶತ್ರುಗಳನ್ನು ಸೋಲಿಸಿದರು. ತಮ್ಮ ರಾಜ ಅದೇಕೆ ಶತ್ರುವಿನ ಖಡ್ಗಕ್ಕೆ ಬೇಕೆಂದೇ ಬಲಿಯಾದನೆಂಬುದು ಆಗ ಅವರಿಗೆ ತಿಳಿಯಿತು.

ಉಚ್ಚತರ ಆತ್ಮಗಳಿಗೆ ಉತ್ಸರ್ಗವೆಂಬುದು ತುಂಬಾ ಸಹಜವಾದ ಕ್ರಿಯೆ. ಅದು ಥಕ್ಕನೆ ಯಾವೊಂದು ಯೋಜನೆಯೂ ಇಲ್ಲದೆ ಉಂಟಾಗುವಂತಹದು.

ಸಂತ ವಿನ್ಸೆಂಟ್ ಡೀ ಪಾಲ್ ಒಂದು ದಿನ ಮಾರ್ಸೆಲ್ಸ್ (ಫ್ರಾನ್ಸ್) ದಲ್ಲಿ ಕೈದಿಗುಲಾಮರನ್ನು ನೋಡಲು ಹೋದರು. ಅವರ ದೃಷ್ಟಿ ಅತಿ ಉದಾಸೀನ ಗುಲಾಮನತ್ತ ಹರಿಯಿತು. ಅವನ ಬೇಸರದ ಕಾರಣ ಕೇಳಿದರವರು. 'ನನ್ನ ಹೆಂಡತಿ ಮಕ್ಕಳು ಇಲ್ಲಿಂದ ಬಹು ದೂರದಲ್ಲಿದ್ದಾರೆ. ನನ್ನ ಮನಸ್ಸು ಖಿನ್ನವಾಗಿದೆ"-- ಎಂದ ಆ ಗುಲಾಮ. ಸಂತ ವಿನ್ಸೆಂಟ್ ಕೆಲ ನಿಮಿಷ ಸುಮ್ಮನಿದ್ದು, ಬಳಿಕ ತಮ್ಮ ಉಡುಗೆ ಕಳಚಿ ಗುಲಾಮನಿಗೆ ಕೊಡುತ್ತ— ' ನಿನ್ನ ಬಟ್ಟೆ ನನಗೆ ಕೊಡು.... ಈ ಉಡುಪು ತೊಟ್ಟು ಇಲ್ಲಿಂದ ಹೊರಟು ಹೋಗು " ಎಂದರು. ಗುಲಾಮ ಹಾಗೆಯೇ ಮಾಡಿ ಪಾರಾದ.

[25 ನೇ ಪುಟ ನೋಡಿ]

# ಸಾಹಿತ್ಯದಲ್ಲಿ ಠಕ್ಕುತನ

— 'ರಘುಸುತ'

> ಇಂದು ಮನುಷ್ಯ ತನ್ನ ಎಲ್ಲ ವ್ಯವಹಾರದ ಕ್ಷೇತ್ರಗಳಲ್ಲೂ ಠಕ್ಕುತನವನ್ನು ಕಾಣುತ್ತಿದ್ದಾನೆ. ಸಾಹಿತ್ಯಕ್ಷೇತ್ರ, ಠಕ್ಕುತನಕ್ಕೆ ಹೊರತಲ್ಲ. ಕೃತಿಚೌರ್ಯ, ಗ್ರಂಥಋಣ ಸ್ಮರಣೆಯಿಲ್ಲದಿರುವುದು, ಅವಾಸ್ತವ ಸಂಗತಿಗಳಿಂದೊಡಗೂಡಿದ ಸಾಹಿತ್ಯ ರಚನೆ ಇವೇ ಮೊದಲಾದ ಅನಾರೋಗ್ಯಕರ ಪ್ರವೃತ್ತಿಗಳು ಸಾಹಿತ್ಯ ಕ್ಷೇತ್ರದಲ್ಲಿ ನಡೆಯುವ ಠಕ್ಕುತನಗಳೆಂಬುದಾಗಿ ತಮ್ಮ ಸ್ವಂತ ಅನುಭವಗಳ ನಿದರ್ಶನಗಳೊಡನೆ ಮಾರ್ಮಿಕವಾಗಿ ಮಾನ್ಯ ಲೇಖಕರು ಪ್ರತಿಪಾದಿಸಿದ್ದಾರೆ.
>
> ಸಂ.

ಇದು ವಿಚಿತ್ರವಾದ ಶೀರ್ಷಿಕೆಯಲ್ಲವೆ! ಶೀರ್ಷಿಕೆ ಎಷ್ಟು ವಿಚಿತ್ರವೊ, ಗಾಬರಿ ಹುಟ್ಟಿಸುವಂತಹುದೊ, ಇದರ ಒಳಗುಟ್ಟನ್ನು ತಿಳಿದ ನಂತರ ಅಂತಹುದಕ್ಕಿಂತಲೂ ಹೆಚ್ಚಿನ ಭಯಾನಕತೆ ನಮ್ಮನ್ನು ಆವರಿಸುತ್ತದೆ. ಜನಜೀವನದ ಬೇರೆ ಬೇರೆ ಅಂಗಗಳಲ್ಲಿ ಇರುವಂತೆ ಸಾಹಿತ್ಯಾಂಗದಲ್ಲೂ ಸುಳ್ಳು, ಠಕ್ಕುತನ, ಮೋಸ, ವಂಚನೆಗಳು ನಡೆಯುತ್ತವೆ.

ಪ್ರಸ್ತುತ ಜನ ಜೀವನ ತುಂಬಾ ಗೊಂದಲಮಯವಾಗಿದೆ. ಏರುಪೇರಿನಿಂದ ಕೂಡಿದ ಇಂದಿನ ದೈನಂದಿನ ವ್ಯವಸ್ಥೆಯನ್ನು ಪ್ರತಿಯೊಬ್ಬರೂ ಎದುರಿಸಲೇಬೇಕಾಗಿದೆ. ಬಡವ, ಬಲ್ಲಿದರಿಂದ ಹಿಡಿದು ರೈತಾಪಿ ಜನರವರೆಗೆ ಹೆಚ್ಚು ಜನ ಇಂತಹ ಅಶುದ್ಧಾಂಗ ಸುಳಿಯಲ್ಲಿ ಸಿಕ್ಕಿದ್ದಾರೆ. ಸಾಹಿತ್ಯವು ಜನಜೀವನದ ಪ್ರತಿಬಿಂಬ, ಕೈಗನ್ನಡಿ ಎನ್ನುವ ಜನ ಈಗ ಕನ್ನಡದಲ್ಲಿ ಬರುತ್ತಿರುವ ಕೃತಿಗಳನ್ನೇ ಓದಿದರೆ ಈ ಅರ್ಥೈಸುವಿಕೆ ಎಷ್ಟು ಜಳ್ಳಾಗುತ್ತಿದೆ, ಜಳ್ಳಾಗಿವೆ ಎಂಬುದರ ಅರಿವಾಗುವುದು. ಸಾಹಿತ್ಯದಲ್ಲಿ ನಿಜಜೀವನ ಚಿತ್ರಣಗಳು ಬರುತ್ತಲೇ ಇಲ್ಲ ಎಲ್ಲವೂ ಕಲ್ಪನಾಮಯವಾದವುಗಳು. ಸಾಹಿತ್ಯ ನಿರ್ಮಾಣದಲ್ಲಿ ಕಲ್ಪನೆಯು ಬೆನ್ನೆಲುಬೇ ಬೇಡ ಎಂದಲ್ಲ. ಕಲ್ಪನೆಯ ಅಂಶ, ಜನ ಜೀವನದ ಚಿತ್ರಣಗಳು, ಹಾಲು ನೀರಿನಷ್ಟೇ ಇರಬೇಕು. ಬರೀ ನೀರೇ ಇದ್ದರೆ ಅಂತಹ ಹಾಲನ್ನು ಹಾಲು ಎಂದು ಕರೆಯಲಾದೀತೆ? ಇಂದಿನ ಅನೇಕ ಕನ್ನಡ ಭಾಷೆಯ ಕಾದಂಬರಿಗಳು ಸತ್ಯತೆಯ ವಾಸ್ತವತೆಗಳಿಂದ ದೂರ ಉಳಿದಿವೆ. ಇದು ಠಕ್ಕುತನವಲ್ಲದೆ ಮತ್ತೇನು? ಓದುಗರನ್ನು ಮೋಸಗೊಳಿಸುವ ವಿದ್ಯೆಯಲ್ಲವೆ ಇದು? ........ ಇಷ್ಟು ವರ್ಷಗಳಾದ ಮೇಲೂ ಕೂಡ ಇನ್ನೂ ಯುವಕ ಯುವತಿಯರ ಕೀಳು ಮನೀಷೆಯಾದ ಸಾಮಾನ್ಯ ಮಟ್ಟದ ಪ್ರೇಮಕ್ಕೇ ಹೆಚ್ಚು ಪ್ರಾಮುಖ್ಯತೆ ಕೊಡಲಾಗುತ್ತಿದೆ. ಇದು ಬೇಡವೆಂದಲ್ಲ. ಆದರೆ ಕಾಲೇಜು ವಿದ್ಯಾರ್ಥಿ, ವಿದ್ಯಾರ್ಥಿನಿಯರ, ಅಂತೆಯೇ ಇಂದಿನ ಯುವ ಜನಾಂಗದಲ್ಲಿ ಕಾಮ; ಪ್ರೇಮಗಳಿರುವಂತೆಯೆ ಇತರೇ ಸಮಸ್ಯೆಗಳಿಗೂ ಸಮಾನ ಸ್ಥಾನವಿದೆ. ಇಂದಿನ ಯುವ ಜನಾಂಗದಲ್ಲಿರುವ ಜ್ಞಾನ ಪಿಪಾಸತೆ, ಅಶಾಂತಿ ಆಕ್ರೋಶಗಳಿಗೆ ಕಾರಣಗಳನ್ನು ಕಂಡು ಹಿಡಿದು, ಅವುಗಳನ್ನು ಸಾಹಿತ್ಯದಲ್ಲಿ ಚಿತ್ರಿಸುವ ಪ್ರಯತ್ನಗಳು ನಡೆದಿವೆಯೇ? ........ ಈ ಪ್ರಶ್ನೆಗೆ ಉತ್ತರ ಶೂನ್ಯ.... ಇಂತಹ ಆಧುನಿಕ ಸಮಸ್ಯೆಗಳ ಕಡೆ ನಮ್ಮ ಕಾದಂಬರೀಕಾರರು ತಮ್ಮ ಗಮನವನ್ನು ಹರಿಸುತ್ತಿಲ್ಲ.

ಈ ಸಮಸ್ಯೆಗಳಿಗೆ ಸೂಕ್ತ ಪರಿಹಾರ ತೋರ್ಪಡಿಸು ತ್ತಲೂ ಇಲ್ಲ. ಹೀಗೇಕೆ? ಇವಕ್ಕೆಲ್ಲ ಪರಿಹಾರ ವಿಲ್ಲವೆ? ಎಂದು ಯೋಚಿಸಬೇಕಾಗಿದೆ.

ಇತ್ತೀಚಿಗೆ ಕನ್ನಡ ಸಾಹಿತ್ಯವೇ ಏನು, ಎಲ್ಲ ಭಾಷೆಯ ಸಾಹಿತ್ಯಗಳಲ್ಲೂ ನವ್ಯದವರದ್ದೊಂದು ಗಲಾಟೆ. ಅರ್ಥವಿಲ್ಲದ ಪದ ಸಮೂಹದ ರಚನೆ ಇವ ರದ್ದು. ಇದೊಂದು ರೀತಿಯ ಠಕ್ಕುತನ. ಆ ಪದ ಗಳಲ್ಲೇನೋ ಒಳ ಅರ್ಥವಂತೆ; ನಾಲ್ಕು, ಆರನೇ ಸಾಲನ್ನು ಸೇರಿಸಿದರೆ ಒಂದು ಅರ್ಥವಂತೆ ಒಂದು ಏಳನೇ ಸಾಲಿಗೆ ವತ್ತೇನೋ ಅರ್ಥವಂತೆ! ........ ಒಮ್ಮೊಮ್ಮೆ ಬರೆದವನಿಗೇನೇ ಅದರ ಅರ್ಥವಾಗುವು ದಿಲ್ಲ. ಅಂದರೆ ಸಾಹಿತ್ಯ ರಚನೆ ಎನ್ನುವುದು ಜಗ್ಲ ರ್‌ನ ಕಾರ್ಯವೇನು? ........ ಇದೇಕೆ ಹೀಗೆ? ಸಾಹಿತ್ಯ ವೆಂದರೆ ಏನು? ಸಾಮಾನ್ಯ ಜನರಿಗೆ ಅರ್ಥ ವಾಗುವ ವಿಷಯ ವಿವರಗಳ ಪದಸಮೂಹವಲ್ಲವೆ ಅದು? ಹಾಗಿದ್ದಲ್ಲಿ ಸ್ಪಷ್ಟ ಚಿತ್ರಣಗಳಿರಬೇಕಲ್ಲವೇ? ನಿರೂಪಣೆಯಲ್ಲಿ ವೈವಿಧ್ಯತೆಯಲ್ಲಿ ಸರಳತೆ ಇರಬೇಕ ಲ್ಲವೆ?...........ಇವೆಲ್ಲಕ್ಕಿಂತ ಹೆಚ್ಚಾಗಿ ಜನಜೀವ ನದ ಒಳ, ಹೊರಗುಗಳನ್ನು, ಎಲ್ಲ ರೀತಿಯ ಗುಟ್ಟುಗಳನ್ನು ಸಂಪೂರ್ಣವಾಗಿ ಚಿತ್ರಿಸುತ್ತೇವೆಂಬು ದರ ಒಣ ಜಂಬ. ಹೀಗೆ ಮಾಡುವಾಗ ಶ್ಲೀಲ, ಅಶ್ಲೀ ಲಗಳ ಪ್ರಶ್ನೆಯೇ ಇಲ್ಲವಂತೆ! ನಾವು ಹೇಳಲಾಗದ, ತಿಳಿಸಲಾಗದ ವಿವರಗಳನ್ನು ಅಸಹ್ಯ ಪದ ಸಮೂ ಹದ ರೀತಿಯಲ್ಲಿ ಕೊಡಬೇಕಂತೆ. ಗುಪ್ತಾಂಗಗಳ ವಿವರಗಳನ್ನೂ ಕೊಡಬೇಕಂತೆ. ಹಾಗಿದ್ದಲ್ಲಿ ಬೀದಿ ಯಲ್ಲಿ ನಿಂತು ಹಾದಿಹೋಕರನ್ನು ಆಕರ್ಷಿಸಲು ಪ್ರಯತ್ನಿಸುವ ಕೆಳಮಟ್ಟದ ವೇಶ್ಯೆಗೂ, ಗರತಿಗೂ ವ್ಯತ್ಯಾಸವಿಲ್ಲವೇನು? ಕೆಲವೊಂದು ನಿಯಮ, ಕಟ್ಟುಪಾಡುಗಳನ್ನು ನಾವು ಸಾಹಿತ್ಯ ರಚನೆಯಲ್ಲಿ ಮಾಡಬಾರದೇನು?....ಸ್ವಚ್ಛಂದತೆಯೇ ತಾಂಡವವಾ ಡಬೇಕೇನು?

ಕನ್ನಡ ಕಾದಂಬರಿ, ಕತೆಗಳಲ್ಲಿ ಇತ್ತೀಚಿಗೆ ಜಾತೀಯತೆ ತಲೆಹಾಕಿದೆ. ಈಗ ಇದೊಂದು ಫ್ಯಾಷನ್ ಆಗಿದೆ. ಅವರಲ್ಲೂ ಮುಂದುವರೆದ ಜನಾಂಗಗಳಾದ ಬ್ರಾಹ್ಮಣ ಮತ್ತು ವೀರಶೈವರು ಹಾಗೂ ಕೆಲವೊಮ್ಮೆ ಒಕ್ಕಲಿಗ ಕುಟುಂಬಗಳನ್ನು ತೆಗಳುವುದು ತಮ್ಮ ಆಜನ್ಮಸಿದ್ಧವಾದ ಹಕ್ಕೇನೋ ಎನ್ನುವಂತೆ ಪ್ರವರ್ತಿಸಿದ್ದಾರೆ. ಇದರ ಮಧ್ಯೆ ಹರಿ ಜನೋದ್ಧಾರದ ಸೋಗು. ಮೇಲುವರ್ಗದ ಜನಾಂಗ ಗಳಲ್ಲಿರುವ ಸಣ್ಣಪುಟ್ಟ ಲೋಪ, ದೋಷಗಳನ್ನು ತಮ್ಮ ಮಾನಸಿಕ ದುರ್ಬಲತೆಯಿಂದ ಬೃಹದಾಕಾರ ಮಾಡಿ, ಈ ಜನಾಂಗಗಳಲ್ಲಿರುವವುಗಳೆಲ್ಲ ಬರೀ ಅನಿಷ್ಟಗಳೇ, ಉತ್ತಮ ಗುಣಗಳೇ ಇಲ್ಲ — ಎನ್ನು ವ ರೀತಿಯಲ್ಲಿ ಚಿತ್ರಿಸಿದ್ದಾರೆ. ಇವು ಚಲನಚಿತ್ರ ಗಳೂ ಆಗಿವೆ. ಹೀಗೆ ಚಿತ್ರಿಸುವ ಜನಕ್ಕೆ ಧಾರ್ಮಿಕ ಮತ್ತು ಜಾತೀಯತೆ ಇವೆರಡರ ನಡುವಿನ ವ್ಯತ್ಯಾ ಸವೇ ಗೊತ್ತಿಲ್ಲವೆಂದು ಕಂಡುಬರುತ್ತದೆ. ಮಠಗಳು ಸ್ವಾಮಿಗಳು, ಅರ್ಚಕರು, ಪೂಜಾರಿಗಳು ಇವರು ಗಳನ್ನು ತೆಗಳಿ, ಕೃತಕತೆಯ ಲೇಪ ಸವರಿ, ಠಕ್ಕು ತನದಲ್ಲಿ ಚಿತ್ರಿಸಿದ್ದಾರೆ. ಹೀಗೆ ಮಾಡಿದಲ್ಲಿ ಅವರು ಗಳು ಉತ್ತಮ ಚಿತ್ರಣಕಾರರಾಗುತ್ತಾರಂತೆ! ....ಇದು ನಿಜವೇ ಆದಲ್ಲಿ ಎಲ್ಲ ಮಠಾಧಿಪತಿಗಳೂ, ಧರ್ಮಾ ಧಿಕಾರಿಗಳೂ ದುಷ್ಟರೆ! ಹಾಗಿದ್ದಲ್ಲಿ ಇದುವರೆವಿಗಾ ಗಲೇ ಧರ್ಮಲುಪ್ತವಾಗಿ, ಅಧರ್ಮ ತಾಂಡವವಾಡಬೇ ಕಾಗಿತ್ತು! .... ಹಾಗಾಗಿಲ್ಲ.... ಕಾರಣವೇನು? .... ಸಾಹಿತ್ಯಕ, ಸಾಂಸ್ಕೃತಿಕ, ಶೈಕ್ಷಣಿಕ, ಧಾರ್ಮಿಕ ಸೇವೆಯನ್ನು ಉತ್ಕೃಷ್ಟ ರೀತಿಯಲ್ಲಿ ಈ ಸಂಸ್ಥೆಗಳು ಮಾಡಿಲ್ಲವೆ? ಅವುಗಳ ಪ್ರಗತಿಗಾಗಿ ದುಡಿಯುತ್ತಿ ರುವುದರ ಸುಚಿತ್ರಣವನ್ನು ಎಲ್ಲಾದರೂ ನಾವು ಕಾಣುತ್ತೇವೆಯೆ? ಈ ಪ್ರಶ್ನೆಗೆ ಉತ್ತರ ಶೂನ್ಯ! ಮಠಗಳು, ಸ್ವಾಮಿಗಳು, ಆಶ್ರಮಗಳು, ಆಚಾ ರ್ಯರುಗಳ ಬಹುಮುಖ ಸೇವೆಯ ಚಿತ್ರಣ ಒಂ ದರಲ್ಲಿಯೂ ಕಂಡುಬರುವುದಿಲ್ಲ ........ ಏಕೆ ....? ಇಂದಿನ ಲೇಖಕರಿಗೆ ಧಾರ್ಮಿಕ ಹಿನ್ನೆಲೆಯೇ ಇಲ್ಲ ವೆನ್ನೋಣವೆ? ಪ್ರಾಚೀನ ಗ್ರಂಥಗಳನ್ನು ಇಂದಿನ ಮಾನದಿಂದ ಅಳೆಯುತ್ತಾರಂತೆ! .... ಅವರುಗಳು ಓದುವುದೂ ಕುಹಕದ ದೃಷ್ಟಿಯಿಂದಲೇ ಹೊರತು, ನೈಜತೆಯ ದೃಷ್ಟಿಯಿಂದಲ್ಲ.... ಇವರಿಗೆ ಧರ್ಮವೇ ಬೇಡ .... – ಇಂತಹ ಧರ್ಮಲಂಡರು ತಮಗೆ ಇಷ್ಟ ಬಂದಂತೆ ಚಿತ್ರಿಸುವ ಓರೆ ಕೋರೆಯ ವಿಷಯದ ಚಿತ್ರಣವೆ ಸಾಹಿತ್ಯದ ತುಣುಕು ಎಂದು ಕರೆದು

ಕೊಳ್ಳುತ್ತಾರೆ. ಜನತೆಯನ್ನು ಈ ರೀತಿ ತಪ್ಪು ಮಾರ್ಗಕ್ಕೊಯ್ಯುವ ಕಾರ್ಯಕ್ಕಿಂತಲೂ ಮತ್ತೊಂದು ರೀತಿಯ ಠಕ್ಕತನ ಉಂಟೇನು ?

ಮತ್ತೂ ಒಂದು ಬಗೆಯ ಲೇಖಕರುಂಟು. ಇವರು ಕತೆಗಾರರು. ಬೇರೆ ಭಾಷೆಗಳಲ್ಲಿರುವ ಉತ್ತಮ ಕಥೆಗಳನ್ನು ಅಚ್ಚುಕಟ್ಟಾಗಿ ತಮ್ಮ ಭಾಷೆಯಲ್ಲಿ (ಪ್ರಸ್ತುತ ಕನ್ನಡದಲ್ಲಿ) ಇಳಿಸುತ್ತಾರೆ. 'ಅನುವಾದ' 'ಆಧಾರ' ಎಂಬುದಾಗಿ ಬರೆಯುವುದು ಹೋಗಲಿ, ಇಂತಹ ಕೃತಿಯಿಂದ ಸ್ಫೂರ್ತಿಗೊಂಡಿದ್ದೇವೆಂಬುದನ್ನೂ ಸೂಚಿಸುವುದಿಲ್ಲ. ಆ ಕೃತಿ ನಿರ್ಮಾಣ ಪೂರ್ತಿ ತಮ್ಮದೇ ಎಂದು ಸ್ವಾಯತ್ತತೆ ಸಾಧಿಸುತ್ತಾರೆ. ಮೂಲ ಕೃತಿಯನ್ನು ಸ್ಮರಿಸುವ ಕೃತಜ್ಞತೆ ಅವರಲ್ಲಿ ಇಲ್ಲವೇ ಇಲ್ಲ. ಇದಕ್ಕೆಲ್ಲ ಒಂದೇ ಕಾರಣ; ಪತ್ರಿಕೆಗಳಲ್ಲಿ ತಮ್ಮ ಹೆಸರು ಬೇಗ ಬೇಗ ಕಾಣಿಸಿಕೊಳ್ಳಬೇಕು, ಬೇಗ ಬೇಗ ಖ್ಯಾತಿಯ ಶಿಖರವನ್ನೇರಬೇಕು. ಅದರ ದಾರಿಗಳು ಯಾವುದೇ ಆಗಿರಲಿ ಭಯವಿಲ್ಲ.

ಒಮ್ಮೆ ಹೀಗಾಯಿತು. ಸುಮಾರು ಇಪ್ಪತ್ತು ವರ್ಷಗಳ ಹಿಂದಿನ ಮಾತು. ಹಿಂದೀ ಸಾಹಿತ್ಯದ ಸುಪ್ರಸಿದ್ಧ ಕಥೆಗಾರರೊಬ್ಬರ ಕಥೆಗಳನ್ನು ಕನ್ನಡಕ್ಕೆ ಅನುವಾದಿಸಲು ಅನುಮತಿ ಪಡೆದೆ. ಕೆಲವೊಂದು ಕಥೆಗಳನ್ನು ಅನುವಾದಿಸಿದೆ. ನಾಲ್ಕೈದು ವರ್ಷಗಳಾದ ಮೇಲೆ ನಾನು ಅನುವಾದಿಸಿದ್ದ ಒಂದು ಕಥೆಯನ್ನು ಓರ್ವ ಲೇಖಕರು ಕನ್ನಡದ ಸುಪ್ರಸಿದ್ಧ ಪತ್ರಿಕೆಯಲ್ಲಿ ಪ್ರಕಾಶಗೊಳಿಸಿಯೇ ಬಿಟ್ಟರು. ಆ ನಂತರ ಇಪ್ಪತ್ತು ವಯಸ್ಸಿನ ಆ ಲೇಖಕರು ಸಿಕ್ಕಿದಾಗ, ನಾನು ಕಥೆಯ ಬಗ್ಗೆ ವಿಚಾರಿಸಿದೆ. ಅವರು ಅದು ತಮ್ಮ ಸ್ವಂತ ಕಥೆಯೆಂದೇ ತಿಳಿಸಿದರು. ಹಾಗಿದ್ದರೆ ಈ ಇಪ್ಪತ್ತು ವರ್ಷದ ಲೇಖಕ ಹುಟ್ಟುವುದಕ್ಕೆ ಮುಂಚೆ ರಚಿತವಾದ ಮೂಲ ಹಿಂದೀ ಲೇಖಕರ ಕಥೆಯು ಸುಳ್ಳನದೇ ಇರಬೇಕಲ್ಲವೆ !

ಒಮ್ಮೆ ಯಾವುದೋ ಒಂದು ಘಟನೆಯ ಬಗ್ಗೆ ಪ್ರಕಟಣೆ ಹೊರಬಿದ್ದಿತ್ತು. ಅದರ ಬಗ್ಗೆ ವಿವರಗಳೂ ಬಂದಿದ್ದವು. ಅದನ್ನು ಉಪಯೋಗಿಸಿಕೊಂಡು ಕಥೆಯೊಂದನ್ನು ಬರೆದೆ, ಮೂಲ ಹೇಗೆಂಬುದನ್ನು ಸೂಚಿಸಿದ್ದೆ. ಐದು ತಿಂಗಳಾದ ಮೇಲೆ ಹಲವಾರು ವ್ಯತ್ಯಾಸಗಳಿಂದ ಇದೇ ಕಥೆಯನ್ನು ನಮ್ಮ ಓರ್ವ ದೊಡ್ಡ ಲೇಖಕರು ಹೆಚ್ಚು ಸಂಖ್ಯೆಯ ಪ್ರಸಾರವುಳ್ಳ ಪತ್ರಿಕೆಯೊಂದರಲ್ಲಿ ಪ್ರಕಟಿಸಿದರು. ಒಮ್ಮೆ ಆ ಲೇಖಕರನ್ನು ಭೇಟಿ ಮಾಡಿದಾಗ 'ನೀವು ಈ ರೀತಿ ಮಾಡಬಹುದೆ? ' ಎಂದು ಕೇಳಿದ್ದಕ್ಕೆ ಅವರು 'ಇಲ್ಲ, ಇಲ್ಲ ಬಹಳ ಮುಂಚೆಯೇ ಅದನ್ನು ರಚಿಸಿದ್ದೆ ' — ಎಂದರು. ಅಂದರೆ ಇವರು ಕಥೆಯನ್ನು ಬರೆದ ಮೇಲೆ ಆ ಘಟನೆ ನಡೆದಿರಬೇಕಲ್ಲವೇ ? .......... ನಂತರ ಮೂಲಸಾಮಗ್ರಿ, ಮತ್ತು ಮುದ್ರಿತವಾದ ಕಥೆಯನ್ನು ಪತ್ರಿಕಾ ಸಂಪಾದಕರಿಗೆ ತೋರಿಸಿದಾಗ ಅವರು ಮಮ್ಮಲ ಮರುಗಿದರು. ಇಂತಹ ಠಕ್ಕುತನಗಳು ಸಾಮಾನ್ಯ. ಇಂತಹವು ನೂರೆಂಟು ನಡೆಯುತ್ತಿವೆ, ನಡೆದಿವೆ.

ಭಾವನೆಯನ್ನೊ, ಕಥೆಯ ಚೌಕಟ್ಟನ್ನೋ ಎರವಲು ಪಡೆಯುವುದು ಸಾಮಾನ್ಯವಾಗಿ ಎಲ್ಲಾ ಸಾಹಿತ್ಯಾಂಗಗಳಲ್ಲೂ, ಎಲ್ಲ ಭಾಷೆಗಳಲ್ಲೂ ರೂಢಿಯಲ್ಲಿದೆ. ಆಂಗ್ಲ ಲೇಖಕರು ತಾವು ಬರೆದಿರುವ ಪುಸ್ತಕಕ್ಕೆ ಹತ್ತಾರು ಪುಸ್ತಕಗಳಿಂದಾದರೂ, ವಿಷಯ ಸಂಗ್ರಹ ಮಾಡಿರುವ ಎಲ್ಲ ಪುಸ್ತಕಗಳ ಪಟ್ಟಿಯನ್ನು ಕೊನೆಯಲ್ಲಿ ಕೊಡುವರು. ಷೇಕ್ಸ್‌ಪಿಯರ್ ಕೂಡ ತಾನು ಸಾಮಗ್ರಿಯನ್ನು ಯಾವ ಮೂಲದಿಂದ ಪಡೆದಿದ್ದೇನೆ ಎಂಬುದನ್ನು ಹೇಳಿಕೊಂಡಿದ್ದಾನೆ. ಆದರೆ ನಮಲ್ಲಿ ಆ ರೂಢಿಯೇ ಇಲ್ಲ. ನಾಲ್ಕಾರು ಪುಸ್ತಕಗಳ ಸಾರಸಂಗ್ರಹವನ್ನೇನೋ ಕೊಡುವರು. ಆದರೆ ಯಾವ ಯಾವ ಗ್ರಂಥಗಳಿಂದ ಉಪಯೋಗವನ್ನು ಪಡೆಯಲಾಗಿದೆ ಎಂಬುದನ್ನು ಮಾತ್ರ ತಿಳಿಸುವುದಿಲ್ಲ .... ಹೀಗೇಕೆ?....ಯಾವ ಮೂಲದಿಂದ ವಿಷಯ ಸಂಗ್ರಹಣ ಮಾಡಿದ್ದೇವೆ ಎಂದರೆ ಅದು ಗೌರವಕ್ಕೆ ಕಡಿಮೆಯೆ? ಈಗ ಪ್ರಸಿದ್ಧಿ ಪಡೆದು ಉತ್ತುಂಗ ಶಿಖರಕ್ಕೇರಿರುವ ಓರ್ವ ಕನ್ನಡ ಲೇಖಕರ ಹಲವಾರು ನಾಟಕಗಳು ಈ ರೀತಿ ಎರವಲು ಪಡೆದಿರುವುಗಳೇ ! ಆದರೆ ಆ ಮಾತನ್ನು ಎಲ್ಲಿಯೂ ಹೇಳಿಕೊಂಡಿಲ್ಲ. ಅಮೇರಿಕಾದ ನೀಗ್ರೋ ಸಮಸ್ಯೆ, ಇಲ್ಲಿ ಹರಿಜನ ಸಮಸ್ಯೆ ಆಗಿರುತ್ತದೆ, ಇತ್ಯಾದಿ ಇತ್ಯಾದಿ........ ಈಗ ಜೀವಂತ

ವಾಗಿರುವ ಮತ್ತೋರ್ವ ಪ್ರಖ್ಯಾತ ಲೇಖಕರು ಪ್ರಾಚೀನ ಕನ್ನಡ ಕಾವ್ಯವೊಂದನ್ನು ಅನಾಮತ್ತು ಎತ್ತಿ ಹೊಡೆದು, ಅದರಲ್ಲಿಯ ವಾಕ್ಯಗಳನ್ನು ಹಾಗೆ ಹಾಗೆಯೇ ಬಡಿದು ಕೆಡವಿದ್ದಾರೆ. ಆ ನಾಟಕ ಬಹುಶಃ ಈಗ ಮೂರೋ ನಾಲ್ಕೋ ಮುದ್ರಣಗಳನ್ನು ಕಂಡಿರಬೇಕು. ಇಷ್ಟಾದರೂ ಒಮ್ಮೆ ತಪ್ಪಿಯೂ ಇಂತಹ ಕಾವ್ಯದಿಂದ ವಾಕ್ಯಗಳನ್ನು ಉಪಯೋಗಿಸಿಕೊಂಡಿದ್ದೇನೆ ಎಂದು ಅವರು ಹೇಳಿಲ್ಲ; ಬೇರೆಯವರು ಹೇಳುವುದಕ್ಕೆ ಹೋಗಿಲ್ಲ. ಕಾರಣ ಹಾಗೇನಾದರೂ ಹೇಳಲಿಕ್ಕೆ ಪ್ರಯತ್ನಿಸಿದಲ್ಲಿ ಜಾತೀಯತೆಯ ಮಾತು ಬರುತ್ತದೆ.

ಆಂಗ್ಲ ಭಾಷೆಯಲ್ಲಿರುವ ಕಾದಂಬರಿಗಳನ್ನು ಎತ್ತಿಹಾಕಿರುವ ಸನ್ನಿವೇಶಗಳಂತೂ ಲೆಕ್ಕವೇ ಇಲ್ಲ. ಇತ್ತೀಚೆಗೆ ನಡೆದ ಘಟನೆ ಇದು. ಓರ್ವ ಲೇಖಕಿ ಒಂದು ಆಂಗ್ಲ ಕಾದಂಬರಿಯನ್ನು ಅನಾಮತ್ತು ಕನ್ನಡದಲ್ಲಿ ಎತ್ತಿ ಹಾಕಿದರು. ಜನಪ್ರಿಯವಾಯಿತು. ಅದು ಚಲನ ಚಿತ್ರವೂ ಆಯಿತು. ಪಾಪ, ಯಾರೋ ಪುಣ್ಯಾತ್ಮ ಓದುಗರು ಇಂತಹ ಕಾದಬರಿಯ ಅನುವಾದವಿದು ಎಂದು ಪತ್ರಿಕೆಗಳಲ್ಲಿ ತಿಳಿಸಿದರು. ಆಗ ಆ ಲೇಖಕಿಗೆ ಜ್ಞಾನೋದಯವಾಯಿತು. ತಾವು ಇಂತಹ ಕಾದಂಬರಿಯಿಂದ ಸ್ಫೂರ್ತಿ ಪಡೆದಿದ್ದೇವೆಂದು ಬರೆದು ಕಳುಹಿಸಿದುದಾಗಿಯೂ, ಆದರೆ ಪ್ರಕಾಶಕರು ಅದನ್ನು ಬಿಟ್ಟಿರುವರೆಂದೂ ಹೇಳಿಕೆ ಕೊಟ್ಟರು. ಈ ಹೇಳಿಕೆ ಕೊಡುವಷ್ಟು ಹೊತ್ತಿಗೆ ಆ ಪುಸ್ತಕ ಎರಡು ಮುದ್ರಣಗಳನ್ನು ಕಂಡಿತ್ತು. ಈ ಎರಡನೇ ಮುದ್ರಣದ ಸಮಯದಲ್ಲೂ ಅದು ಹೊಳೆಯಲಿಲ್ಲವೇ? ಬಹಳಷ್ಟು ಲೇಖಕರು ಇದೇ ರೀತಿ ಮಾಡಿದ್ದಾರೆ.... ಎಂತೆಂತಹುದನ್ನೋ ದಕ್ಕಿಸಿಕೊಂಡಿರುವ ಅವರಿಗೆ ಇದು ಯಾವ ಲಕ್ಷ್ಯ, ಬಿಡಿ!

ಈಗ ಹಾಲಿ ಬೆಂಗಳೂರಿನಲ್ಲಿ ಕೆಲವು ಲೇಖಕರಿದ್ದಾರೆ. ಅವರು ಕಾದಂಬರಿಗಳನ್ನು ಬರೆಯುತ್ತಾರೆ. ನಾಳೆಗೆ ಒಂದು ಕಾದಂಬರಿ ಬೇಕೆಂದರೂ ಅವರು ಬರೆದು ಕೊಡಬಲ್ಲರು. ಆ ತಾಕತ್ ಇದೆ ಅವರಲ್ಲಿ. ಒಂದು ಕಾದಂಬರಿ ಬರೆದು ಬೇರೆ ಬೇರೆ ಶೀರ್ಷಿಕೆಗಳೊಡನೆ ನಾಲ್ಕೈದು ಪ್ರಕಾಶಕರಿಗೆ ಕೊಟ್ಟಿರುತ್ತಾರೆ. ಅವಷ್ಟೂ ಪ್ರಕಾಶಗೊಳ್ಳುತ್ತವೆ. ಆದರೆ ಟೋಪಿ ಬಿದ್ದವರು ಯಾರು?......ಓದುಗರು ......ಅವರು ಈ ವಿಷಯವನ್ನು ತಿಳಿಸುವುದಾದರೂ ಯಾರಿಗೆ? ಹೇಗೆ? ಯಾವ ರೀತಿಯಲ್ಲಿ? ಆ ಓದುಗರ ಪ್ರತಿಭಟನೆಯನ್ನು ಆಲಿಸುವವರಾರು? ಲಕ್ಷಿಸುವರಾರು? ಈ ರೀತಿಯಲ್ಲಿ ಅವರು ಅನೇಕ ಕಾದಂಬರಿಗಳನ್ನು ರಚಿಸಿದ್ದಾರೆ. ಒಮ್ಮೆ ಹೀಗಾಯಿತು. ಓರ್ವ ಲೇಖಕರು ಓರ್ವ ಪ್ರಕಾಶಕರಿಗೆ ಒಂದು ಕಾದಂಬರಿಯನ್ನು ಕೊಟ್ಟರು. ಆತ ಮುದ್ರಿಸುವುದು ಸ್ವಲ್ಪ ತಡವಾಯಿತು. ಕೂಡಲೇ ಆ ಲೇಖಕ ಅವೇ ಕಾದಂಬರಿಯನ್ನು ಬೇರೆ ಶೀರ್ಷಿಕೆಯೊಡನೆ ಮತ್ತೋರ್ವ ಪ್ರಕಾಶಕನ ಮುಖಾಂತರ ಪ್ರಕಟಿಸಿಯೇ ಬಿಟ್ಟ. ಅಷ್ಟರಲ್ಲಿ ಮೊದಲ ಪ್ರಕಾಶಕ ಆ ಪುಸ್ತಕವನ್ನು ಅರ್ಧ ಮುದ್ರಿಸಿದ್ದ. ಈಗ ಇವನ ಗತಿ....? ಇದು ಮತ್ತೊಂದು ರೀತಿಯ ಠಕ್ಕುತನ.

ನಾನು ಹಿಂದೆ ಪತ್ರಿಕೆಗಳಿಗೆ ತುಂಬಾ ಲೇಖನಗಳನ್ನು ಕಳುಹಿಸುತ್ತಿದ್ದೆ. ಒಂದೆರಡು ಪತ್ರಿಕೆಗಳು ಲೇಖನಗಳನ್ನೇನೊ ಪ್ರಕಟಿಸಿದವು. ಆದರೆ ಅಲ್ಲಿ ನನ್ನ ಹೆಸರೇ ಇಲ್ಲ ಆ-ನಂತರ ಪರೀಕ್ಷಿಸಿದಲ್ಲಿ ನನ್ನ ಹೆಸರೇ ಅಲ್ಲ. ಬೇರೆ ಲೇಖಕರ ಹೆಸರುಗಳನ್ನೂ ಪ್ರಕಟಿಸಿರಲಿಲ್ಲ. ಒಮ್ಮೆ ಅದರ ಸಂಪಾದಕರು ಸಿಕ್ಕಿದಾಗ ಹೀಗೇಕೆ ಎಂದು ಕೇಳಿದೆ. ಅದಕ್ಕೆ ಅವರು 'ನಿಮ್ಮ ಲೇಖನ ಪ್ರಕಟವಾಯ್ತಲ್ಲ. ಅದಕ್ಕೆ ಸಂತೋಷಪಡಿ, ಹೆಸರೇಕೆ? ಎಂದರು. ಲೇಖಕನ ಹೆಸರು ಪ್ರಕಟವಾಗದೆ, ಲೇಖನ ಪ್ರಕಟವಾದರೆ, ಅದನ್ನು ತನ್ನದು ಎಂದು ಲೇಖಕ ಹೇಗೆ ಹೇಳಿಕೊಂಡಾನು? ಮತ್ತೊಂದು ಪತ್ರಿಕೆ ಲೇಖಕರ ಹೆಸರನ್ನೇ ಅದಲು ಬದಲು ಮಾಡಿ ಪ್ರಕಟಿಸಿತು. ಕಾರಣ ಕೊಡಲು ಆ ಪತ್ರಿಕೆ ನಿರಾಕರಿಸಿತು.

ಇಂತಹವು ನೂರಾರು, ಸಾವಿರಾರು ಉದಾಹರಣೆಗಳು. ಸಾಹಿತ್ಯ ನಿರ್ಮಾಣದಲ್ಲಿ ಸ್ವಚ್ಛತೆಗೆ, ನಿರ್ಮಲತೆಗೆ ಸ್ಥಾನವೇ ಇಲ್ಲವೆ? —



## ಮಣ್ಣಿಲ್ಲದ ಹಲುಸು ಬೆಳೆ

(18 ನೇ ಪುಟದಿಂದ)

ರೀತವಾಗಿ ಬೆಳೆಯುತ್ತಿರುವಾಗ ಆಹಾರದ ಕೊರತೆಯು ತೀವ್ರವಾಗಿರುವುದರಿಂದ ಅದನ್ನು ಆದಷ್ಟು ನಿವಾರಿಸಲು ಈ ಕ್ರಮವು ಮಹತ್ವದ ಸಾಧನವಾಗಿದೆ.

ಜಪಾನರು ಅನೇಕ ಶತಮಾನಗಳಿಂದ ಮನುಷ್ಯರ ಮಲವನ್ನು ಗೊಬ್ಬರವನ್ನಾಗಿ ಉಪಯೋಗಿಸಿದ್ದರು. ದ್ವಿತೀಯ ಮಹಾಯುದ್ಧಕಾಲದಲ್ಲಿ ಅಮೇರಿಕನ್ನರು ಜಪಾನನ್ನು ಆಕ್ರಮಿಸಿದ್ದಾಗ ಆ ಭೂಮಿಯ ಬೆಳೆಗಳಿಂದ ತಮಗೆ ರೋಗಗಳು ಬರಬಹುದೆಂದು ಹೆದರಿ ಹೈಡ್ರೊಪೋನಿಕ್ ರೀತಿಯನ್ನು ವ್ಯವಸ್ಥಾಪಿಸಿದರು.

ಹೈಡ್ರೋಪೋನಿಕ್ ಕ್ರಮದಲ್ಲಿ ಭೂಮಿಯಲ್ಲಿ ಬೆಳೆಯುವುದಕ್ಕಿಂತ ಹೆಚ್ಚು ಅನುಕೂಲಗಳಿವೆ. ಸಾಧಾರಣ ಕ್ರಮದಲ್ಲಿ ಭೂಮಿಯ ಮಣ್ಣಿನ ಗುಣವು ಮಳೆ, ಉಷ್ಣತೆ, ಗಾಳಿ, ಸೂರ್ಯಪ್ರಕಾಶ, ಮಣ್ಣಿನಲ್ಲಿರುವ ಪ್ರಾಣಿ ಮತ್ತು ಸಸ್ಯ ಸಂಬಂಧ ಪದಾರ್ಥಗಳು ಕೊಳೆಯುವುದು, ಇವೇ ಮುಂತಾದ ಕಾರಣಗಳಿಂದ ಬದಲಾಗುತ್ತಿರುತ್ತದೆ. ಮಣ್ಣಿನಲ್ಲಿರುವ ಪಿಡುಗು, ಕೆಟ್ಟ ಬ್ಯಾಕ್ಟೀರಿಯಗಳು ಸಸ್ಯಗಳಿಗೆ ಹಾನಿ ಮಾಡುತ್ತವೆ. ಬಹಳ ನೀರು ಬೇಕಾಗುತ್ತದೆ; ಅರ್ಧದಷ್ಟು ನೀರು ಆವಿಯಾಗಿ ಹೋಗುತ್ತದೆ. ಹೊಸಕ್ರಮದಲ್ಲಿ ಕಡಿಮೆ ನೀರು ಬೇಕು; ನೀರು ಆವಿಯಾಗುವ ಸಂಭವವೇ ಇಲ್ಲ. ಹಳೆಯ ಕ್ರಮದಲ್ಲಿ ನೀರಿನ ಅಭಾವವಿದ್ದರೆ ಬಹು ಕಷ್ಟ; ಪೈರುಗಳು ಒಣಗಿ ನಾಶವಾಗುತ್ತವೆ. ಭೂಮಿಯನ್ನು ಉತ್ತು, ಬಿತ್ತು, ಗೊಬ್ಬರ ಹಾಕಿ, ಎತ್ತುಗಳಿಗೂ ಮನುಷ್ಯರಿಗೂ ಶ್ರಮ ಕೊಡಬೇಕಾಗುತ್ತದೆ. ಹೈಡ್ರೋಪೋನಿಕ್‌ನಲ್ಲಿ ಇದೊಂದೂ ಇಲ್ಲ; ಹೆಚ್ಚು ಬೆಳೆ ಉತ್ಪತ್ತಿಯಾಗುತ್ತದೆ. ದ್ರವರೂಪದ ಮಿಶ್ರಣವನ್ನು ಅಲ್ಪ ಪ್ರಮಾಣದಲ್ಲಿ ಆಗಾಗ್ಗೆ ಹಾಯಿಸಿದರೆ ಸಾಕು.

ಹೈಡ್ರೋಪೋನಿಕ್ ವಿಧಾನವು ಅಮೇರಿಕ, ಯೂರೋಪು, ಆಫ್ರಿಕ, ಆಸ್ಟ್ರೇಲಿಯ, ಜಪಾನ್ ಮತ್ತು ಭಾರತದ ಕೆಲವು ಕಡೆಗಳಲ್ಲಿ ಪ್ರಚಲಿತವಿದೆ. ಅಮೇರಿಕ ಒಂದರಲ್ಲೇ ಸುಮಾರು ಐದುಲಕ್ಷ ಮನೆಗಳಲ್ಲಿ ಈ ಕೃಷಿ ಆಚರಣೆಯಲ್ಲಿದೆ. ಕಳೆದ 15 ವರ್ಷಗಳಲ್ಲಿ ಜಪಾನಿನಲ್ಲಿ ರಸ್ತೆಗಳು, ರೈಲು ಮಾರ್ಗಗಳು, ಕಾರ್ಖಾನೆಗಳು ಮುಂತಾದವುಗಳಿಗಾಗಿ 5,00,000 ಎಕರೆಗಳಷ್ಟು ಜಾಗ ಉಪಯೋಗಿಸಲ್ಪಟ್ಟದ್ದರಿಂದ ವ್ಯವಸಾಯಕ್ಕೆ ಜಾಗ ಬಹಳ ಕಡಿಮೆಯಾಯಿತು. ಆದರೆ ಬಹು ಜಾಣರಾದ ಜಪಾನ್ ರೈತರು ಹೈಡ್ರೋಪೋನಿಕ್ ಕ್ರಮದಿಂದ ಮಣ್ಣಿಲ್ಲದೆಯೇ ಸಾವಿರಾರು ಟನ್‌ಗಳಷ್ಟು ಬೆಳೆಯನ್ನು ಬೆಳೆಯುತ್ತಿದ್ದಾರೆ. ಟೋಕಿಯೋ ಪಟ್ಟಣದ ದಕ್ಷಿಣದಲ್ಲಿರುವ ಷಿಮಿಜೂ ಎಂಬ 60 ಎಕರೆ ವಿಸ್ತೀರ್ಣದ ಮರಳಿನ ಕರಾವಳಿಯಲ್ಲಿ ಮುನ್ನೂರು ಗಾಜಿನ ಮನೆಗಳನ್ನು ನಿರ್ಮಿಸಿ ಅಂಗುಲ ಆಳದ ಜಲ್ಲಿಯ ಪಾತಿಗಳಲ್ಲಿ ಹೈಡ್ರೋಪೋನಿಕ್ ಕ್ರಮದಿಂದ ಸಾವಿರಾರು ಟನ್ ಹಣ್ಣು ಹಂಪಲು, ಕಾಯಿಪಲ್ಯಗಳನ್ನು ಬೆಳೆಯುತ್ತಿದ್ದಾರೆ. ಈ ಕ್ರಮದಿಂದ ಕೆಲಸಗಾರರ ವೆಚ್ಚದಲ್ಲಿ ಶೇಕಡ 50 ಕ್ಕಿಂತಲೂ ಹೆಚ್ಚು ಉಳಿತಾಯವಾಗಿದೆ. ಕಳೆ ಮತ್ತು ಪಿಡುಗುಗಳ ಕಿರುಕುಳ ಕೊಂದರೆಯೂ ತಪ್ಪಿದೆ. —

---

### ಬಲಿದಾನ

(25 ನೇ ಪುಟದಿಂದ)

ಯಿತು. ಆದರೆ ಅವರು ಮಾತ್ರ ಆ ದುಃಖಿತ ಮನುಷ್ಯನಿಗಾಗಿ ಹಲವು ವರ್ಷಗಳ ಗುಲಾಮಗಿರಿ ಸ್ವೀಕರಿಸಲು ಸಿದ್ಧರಾಗಿದ್ದರು !

" ನತ್ವಹಂ ಕಾಮಯೇ ರಾಜ್ಯಂ ನ ಸ್ವರ್ಗಂ ನಾಽಪುನರ್ಭವಮ್ ।
ಕಾಮಯೇ ದುಃಖತಪ್ತಾನಾಂ ಪ್ರಾಣಿನಾ ಮಾರ್ತಿನಾಶನಮ್ ॥ "

ನನಗೆ ರಾಜ್ಯವಾಗಲೀ ಸ್ವರ್ಗ ಮೋಕ್ಷಗಳಾಗಲೀ ಬೇಕಿಲ್ಲ. ಎಲ್ಲ ದುಃಖಸಂತಪ್ತ ಜೀವಿಗಳ ದುಃಖ ಅಳಿಯಲೆಂಬುದೇ ನನ್ನ ಇಚ್ಛೆ. — ಈ ಭಾವವೇ ಮನುಷ್ಯನ ಉಸಿರಾಟದಲ್ಲಿ ಸೇರಿಹೋಗಬೇಕು.

(ಹಿಂದಿಯಿಂದ) —

(9 ನೇ ಪುಟದಿಂದ)

ದರಿದ್ರನಾರಾಯಣನ ಸೇವೆ, ಅನ್ನದಾನಗಳಿಗೆ ಮಹತ್ವವಿದೆ. ವಿವಾಹಯಜ್ಞಯಾಗಗಳಲ್ಲೂ ಪರ್ವಗಳಲ್ಲೂ ಸಂತರ್ಪಣ ಸಮಾರಾಧನಗಳು ಈ ದೃಷ್ಟಿಯಿಂದಲೇ ಮಾನ್ಯತೆ ಪಡೆದವು. ಧರ್ಮರಾಯನ ರಾಜಸೂಯದಲ್ಲಿ ಒಂದು ಲಕ್ಷ ಜನ ಊಟ ಮಾಡಿದ ಸಂಕೇತವಾಗಿ ಒಮ್ಮೆ ಶಂಖವನ್ನೂದುವ ಏರ್ಪಾಟಾಗಿತ್ತು. ಆ ಯಾಗದಲ್ಲಿ ಹಾಗೆ ಒಂದು ನಿಮಿಷವಾದರೂ ಬಿಡುವಿಲ್ಲದಂತೆ ಶಂಖವನ್ನು ಊದಲಾಗುತ್ತಿತ್ತಂತೆ. ಧರ್ಮರಾಯನು ಎಲ್ಲರ ಊಟಗಳ ಬಗ್ಗೆಯೂ ಆಸಕ್ತಿವಹಿಸಿ, ಮತ್ತಾರೂ ಉಳಿಯದಂತೆ ಊಟವಾಗಿದೆಯೆಂದು ತಿಳಿದ ಮೇಲೆ ತಾನು ಊಟಮಾಡುತ್ತಿದ್ದನಂತೆ. ಆತನ ಊಟವಾದಮೇಲೆ ದ್ರೌಪದಿ ಊಟಮಾಡುತ್ತಿದ್ದಳಂತೆ.

ಅತಿಥಿಪೂಜೆಯಲ್ಲಿ ತಾಳ್ಮೆ, ಔದಾರ್ಯ, ನಿರಹಂಕಾರಗಳಿಗೆ ಸ್ಥಾನವಿದೆ. ಒಂದು ಕಥೆಯುಂಟು. ಧರ್ಮರಾಯನು ಕೃಷ್ಣನಿಗಾಗಿ ಚಿನ್ನದ ಹರಿವಾಣವನ್ನು ಮಾಡಿಸಿದ್ದನಂತೆ. ಆ ಹರಿವಾಣವನ್ನು ಮತ್ತಾರೂ ಬಳಸುತ್ತಿರಲಿಲ್ಲ. ಕೃಷ್ಣನ ಊಟವಾದ ಮೇಲೆ ಅದನ್ನು ಶುದ್ಧಿ ಮಾಡಿ ಎತ್ತಿಡುತ್ತಿದ್ದರು. ಈ ಬಗ್ಗೆ ಧರ್ಮರಾಯನ ಮನಸ್ಸಿನಲ್ಲಿ ಒಮ್ಮೆ ಹೆಮ್ಮೆಯಾಯಿತಂತೆ. ಇದನ್ನು ಅರ್ಥಮಾಡಿಕೊಂಡ ಕೃಷ್ಣನು ಒಮ್ಮೆ ಧರ್ಮರಾಯನನ್ನು ರಸಾತಲದಲ್ಲಿ ಬಲಿಚಕ್ರವರ್ತಿಯಲ್ಲಿಗೆ ಕರೆದುಕೊಂಡು ಹೋದನು. ಅಲ್ಲಾದರೋ ಲಕ್ಷಾಂತರ ಸಂಖ್ಯೆಯಲ್ಲಿ ನಿತ್ಯವೂ ಊಟಮಾಡುತ್ತಿದ್ದವರೆಲ್ಲರಿಗೂ ಚಿನ್ನದ ಹರಿವಾಣಗಳಲ್ಲೇ ಬಡಿಸಿದ್ದುದನ್ನು ಕಂಡನು ಧರ್ಮರಾಯ! ಆತನ ಹೆಮ್ಮೆ ಕರಗಿಹೋಯಿತು. ಅತಿಥಿ ಸೇವೆಯಲ್ಲಿ ತಾನೇ ಬಲ್ಲಿದನೆಂಬ ಭಾವನೆ ಬಿಟ್ಟುಹೋಯಿತು.

ಪುರುವಂಶದ ರಂತಿದೇವನ ಕಥೆ ಭಾಗವತದಲ್ಲಿದೆ. ರಾಜನಾದ ಆತನು ಅತಿಥಿ ಸತ್ಕಾರದಲ್ಲೇ ಕಡು ಬಡವನಾಗಿದ್ದನು. ನಲವತ್ತೆರಡು ದಿನ ಉಪವಾಸವಿದ್ದು ನಲವತ್ತೊಂಬತ್ತನೆಯ ದಿನ ತನಗಾಗಿ ಉಳಿದ ನೀರನ್ನೂ ಸಹ ಪಂಚಮನಿಗೆ ದಾನ ಮಾಡಿದನು.

ಸೂರ್ಯವಂಶದ ರಘುಮಹಾರಾಜನು ಅತಿಥಿಗಳಿಗೆ ಎಲ್ಲವನ್ನೂ ಕೊಟ್ಟಮೇಲೆ ಮನೆಯಲ್ಲಿ ಕೇವಲ ಮಣ್ಣಿನ ಮಡಕೆ-ಕುಡಿಕೆಗಳು ಮಾತ್ರ ಉಳಿದುವಂತೆ.

ಹೊಲಗದ್ದೆಗಳಲ್ಲಿ ಬಿದ್ದ ಕಾಳುಗಳನ್ನು ಆರಿಸಿ ತಂದು ಜೀವಿಸುತ್ತಿದ್ದ ಮುದ್ಗಲನೆಂಬಾತನ ಕಥೆ ಮಹಾಭಾರತದ ವನಪರ್ವದಲ್ಲಿದೆ. ಉಪವಾಸವಿದ್ದೂ ಅತಿಥಿಸೇವೆ ಮಾಡುವ ಆತನ ಧರ್ಮನಿಷ್ಠೆಯ ಫಲವಾಗಿ ಸ್ವರ್ಗದ ವಿಮಾನ ಬಂದಿತ್ತು. ಅತಿಥಿಸೇವೆಯಲ್ಲೇ ಆನಂದವನ್ನು ಅನುಭವಿಸುತ್ತಿದ್ದ ಆತನು "ನನಗೆ ಭೋಗಭೂಮಿಯಾದ ಸ್ವರ್ಗ ಬೇಕಿಲ್ಲ, ಅತಿಥಿಪೂಜೆಯ ಆನಂದವೇ ಬೇಕು" -ಎಂದನು. —

(ಮುಂದುವರಿಯುವುದು)

ಕ್ರಿಸ್ತ ಜಯಂತಿ (15ನೇ ಪುಟದಿಂದ)

ಕೇವಲ ಒಂದು ಪಂಥಕ್ಕೆ ಅಂತಹ ತಾರುಣ್ಯ ವೀರನ ಹೆಸರಿನಿಂದ ಒಂದು ಸ್ವತಂತ್ರ ಧರ್ಮ ಹುಟ್ಟಿಕೊಂಡದ್ದು ಯೋಗ್ಯವಾಗಲಿಲ್ಲ. ಯಾಕೆಂದರೆ ಆತನ ವಿಚಾರಗಳು ಕೇವಲ ಒಂದು ಪಂಥಕ್ಕೆ ಸೇರಿದವುಗಳಲ್ಲ. ಆದುದರಿಂದ ಎಲ್ಲ ಧರ್ಮದ ಜನರೂ ಕ್ರಿಸ್ತನ ಜೀವನ, ಉಪದೇಶ, ಮತ್ತು ಬಲಿದಾನದ ಕಡೆಗೆ ನೋಡಬೇಕು ಮತ್ತು ಉಪದೇಶದಂತೆ ನಡೆಯುವ ಸಂತರಜೀವನದ ಅವಲೋಕನ ಮತ್ತು ಅಭ್ಯಾಸ ಮಾಡಬೇಕು.

ಭಾರತಮಾತೆಯ ವಿಶಾಲ ಕುಟುಂಬದಲ್ಲಿ ಪ್ರತಿಯೊಂದು ಧರ್ಮಕ್ಕೆ ಪಂಥಕ್ಕೆ ಮತ್ತು ಮತಕ್ಕೆ ಸ್ಥಾನವಿದ್ದು, ಹಿಂದೂ ಧರ್ಮ ಯಾವ ಧರ್ಮದೊಡನೆಯೂ ವಿರೋಧವನ್ನು ಮಾಡುವದಿಲ್ಲ.

"ಯಸ್ಮಾನ್ನೋ ದ್ವಿಜತೇ ಲೋಕಃ
ಲೋಕಾನ್ನೋ ದ್ವಿಜತೇ ಚ ಯಃ"

ತ್ಯಾಗಿ, ಬ್ರಹ್ಮಚಾರಿ, ಭಗವದ್ಭಕ್ತ ನಿಷ್ಠಾವೀರ ಯೇಸುಕ್ರಿಸ್ತನ ಜಯಂತಿಯನ್ನೂ ಸಹ ನಾವು ನಮ್ಮ ಅವತಾರ ಪುರುಷರ ಜಯಂತಿಯನ್ನು ಆಚರಿಸುವಷ್ಟೇ ಭಕ್ತಿಭಾವದಿಂದ ಆಚರಿಸಬೇಕು. ಹಿಂದೂ ಧರ್ಮದಲ್ಲಿ ಸದ್ಗುರುವಿನ ಉಪಾಸನೆಯ ಯಾವ ಮಾರ್ಗವಿದೆಯೋ ಅದರದೇ ಒಂದು ಸ್ವರೂಪ ಕ್ರೈಸ್ತ ಧರ್ಮ. ಆದ್ದರಿಂದ ಆ ದಿನ ಯೇಸುವಿನ ಗಿರಿಪ್ರವಚನ (Sermon on the mount) ವನ್ನು ಕ್ರೈಸ್ತರಷ್ಟೇ ಅಲ್ಲದೆ ಎಲ್ಲರೂ ಓದಬಹುದು. —

## 'ಸಿದ್ಧಗಂಗಾ' ಪತ್ರಿಕೆ ಚಿರಾಯುವಾಗಲು

## ಹರಸಿ ಹಾರೈಸಿರುವ ಆಜೀವ ಸದಸ್ಯರ ಬಳಗ

247 ಶ್ರೀ ಕೆ. ಎಸ್ ಗಂಗಾಧರಯ್ಯ
S/o ಕೆ. ಎಂ. ಸದಾಶಿವಯ್ಯ
ಕೇತೋಹಳ್ಳಿ, ರಾಮನಗರ ತಾ||
ಬೆಂಗಳೂರು ಜಿಲ್ಲೆ

248 ಶ್ರೀ ಜಿ. ಎಸ್. ಗೋಪಾಲ್
ದೇವರಾಜ ಮಾರ್ಕೆಟ್
ಬೆಂಗಳೂರು-2

249 ಶ್ರೀ ನಾರಾಯಣ
ಶ್ರೀರಾಂಪುರ,
ಬೆಂಗಳೂರು-21

250 ಶ್ರೀ ಎಂ. ಕೆಂಚಪ್ಪ
ಅಸಿಸ್ಟೆಂಟ್ ಕನ್ಸರ್ವೇಟರ್ ಆಫ್ ಫಾರೆಸ್ಟ್
ಮಲ್ಲೇಶ್ವರಂ, ಬೆಂಗಳೂರು-3

251 ಶ್ರೀ ಡಿ. ಪಿ. ಕರಿಬಸವಯ್ಯ
ವಿನಾಯಕ ಹೈಸ್ಕೂಲ್,
ಸಿಟ್ಟೂರ್, ಗುಬ್ಬಿ ತಾ||

252 ಶ್ರೀ ಎಂ.ಎಂ. ಕೃಷ್ಣಪ್ಪ, ಪೈಸ್‌ಫೇರ್‌ಮನ್,
ಬೂದಿಗೆರೆ, ಬೆಂಗಳೂರು ಜಿಲ್ಲೆ

253 ಶ್ರೀ ವೀರಭದ್ರದೇವರು & ಸನ್ಸ್
ಶೀಹಳ್ಳಿ, ಟಿ. ಎನ್. ಪುರ ತಾ||
ಮೈಸೂರುಜಿಲ್ಲೆ

254 ಶ್ರೀ ಸಿ. ಎಸ್. ಅನಂತಪ್ಪರ್
ಬಿಜಾಪುರ

255 ಶ್ರೀ ಎ. ಎಸ್. ಅರಳಿಕಟ್ಟೆ
ಬಿಜಾಪುರ

256 ಶ್ರೀ ಐ ಎಸ್. ಮುದ್ದನೂರ್ ಬಿ.ಇ.,
ಕನಕನವಾಡಿ, ಜಮಖಂಡಿ ತಾ||
ಬಿಜಾಪುರ ಜಿಲ್ಲೆ

257 ಎಸ್. ವಿ. ದೊಡ್ಡಮನಿ
ಜಿ. ಎಲ್. ಬಿ. ಸಿ. ಸೆಕ್ಷನ್ ಆಫೀಸರ್
ಮಹಾಲಿಂಗಪುರ, ಮುಧೋಳ್ ತಾ||
ಬಿಜಾಪುರ ಜಿಲ್ಲೆ

258 ಶ್ರೀ ಟಿ. ವಿಶ್ವನಾಥ್ ಬಿ.ಇ.,
ಅಸಿಸ್ಟೆಂಟ್ ಇಂಜಿನಿಯರ್
ರಬಕವಿ, ಬಿಜಾಪುರ ಜಿಲ್ಲೆ

259 ಶ್ರೀ ಎಸ್. ಟಿ. ಅರಿ,
ಪ್ರೊ|| ಪಾಂಡುರಂಗ ಟಾಕೀಸ್,
ರಾಮದುರ್ಗ, ಬೆಳಗಾಂ ಜಿಲ್ಲೆ

260 ಶ್ರೀ ಎನ್. ಸಚ್ಚಿದಾನಂದ ಮೂರ್ತಿ
ಸಿದ್ಧಗಂಗಾ ರೂರಲ್ ಹೈಸ್ಕೂಲ್
ಪುರುಷನಹಳ್ಳಿ
ದೊಡ್ಡಬಳ್ಳಾಪುರ ತಾ|| ಬೆಂಗಳೂರು ಜಿಲ್ಲೆ

261 ಶ್ರೀ ಎಸ್. ಬಿ. ನಂಜುಂಡಸ್ವಾಮಿ
ಹೋಟೆಲ್ ಮಾಲೀಕರು,
ಸರಗೂರ್, ಮೈಸೂರು ಜಿಲ್ಲೆ

262 ಡಾ|| ಸಿ. ಎನ್. ಮೃತ್ಯುಂಜಯಪ್ಪ
ಶಾಂತಲ ಕ್ಲಿನಿಕ್
ಸರಗೂರ್, ಮೈಸೂರು ಜಿಲ್ಲೆ

263 ಶ್ರೀ ಎಂ. ಎನ್. ಚನ್ನಬಸಪ್ಪ
ಗಣಿತ ಪ್ರಾಧ್ಯಾಪಕರು,
ಇಂಜಿನಿಯರಿಂಗ್ ಕಾಲೇಜ್,
ಸುರತ್ಕಲ್, S.K.

264 ಶ್ರೀ ಎಸ್. ಶಿವಣ್ಣ,
ಪ್ರೊ|| ರಾಮ ಸಿಲ್ಕ್ ಹೌಸ್
ನಗರತಪೇಟೆ, ಬೆಂಗಳೂರು-2

(ಮುಂದುವರಿಯುತ್ತದೆ)

"SIDDAGANGA" Monthly, Sree Siddaganga Mutt. KRN Q-9
Registered with the Registrar of News paper for India under No. 17139/69

# ಹರಿಜನ ಗಿರಿಜನೋದ್ಧಾರಕ್ಕಾಗಿ ವ್ಯಾಪಕ ಕಾರ್ಯಕ್ರಮ

## ಹರಿಜನ ಗಿರಿಜನರ ಪುನರುತ್ಥಾನಕ್ಕಾಗಿ ಕರ್ನಾಟಕ ಸರಕಾರ ಕಂಕಣಬದ್ಧವಾಗಿದೆ. ರಾಜ್ಯದಲ್ಲಿ ಅವರ ಕಲ್ಯಾಣಕ್ಕಾಗಿ ಕೈಕೊಳ್ಳಲಾದ ಕೆಲವು ಕಾರ್ಯಗಳು

1. ಹರಿಜನ ಗಿರಿಜನರಿಗಾಗಿ ಒಂದು ಕೋಟಿ ರೂ. ಮೂಲಧನದ ಅಭಿವೃದ್ಧಿಗಾಗಿ ಕಾರ್ಪೋರೇಶನ್ ಸ್ಥಾಪನೆ –ಇವರಿಗೆ ಸುಮಾರು 500 ಉದ್ಯಮಿಗಳಿಗೆ ಸುಮಾರು 10 ಲಕ್ಷ ರೂ. ಸಾಲ ಕೊಡಲಾಗಿದೆ.
2. ಜನತಾ ವಸತಿ–ಯೋಜನೆ ಹಾಗೂ ನಿವೇಶನ ಹಂಚಿಕೆ ಯೋಜನೆಗಳಲ್ಲಿ ಹರಿಜನ ಗಿರಿಜನರಿಗೆ ವಿಶೇಷ ರಿಯಾಯಿತಿ–ರಾಜ್ಯದಲ್ಲಿ ನೀಡಲಾದ ಒಟ್ಟು ನಿವೇಶನಗಳು ಸುಮಾರು ಏಳು ಲಕ್ಷ, ಅವರಲ್ಲಿ ಹರಿಜನ ಗಿರಿಜನರಿಗೆ ನೀಡಲಾದ ನಿವೇಶನಗಳು-3 ಲಕ್ಷ.
3. ಹರಿಜನ ಗಿರಿಜನರಿಗೆ ಉಚಿತವಾಗಿ ಕಾನೂನು ನೆರವು ಪ್ರತಿ ಜಿಲ್ಲೆಯಲ್ಲಿ ವಕೀಲರ ನೇಮಕ.
4. ಸರಕಾರಿ ಸೇವೆಗಳಿಗೆ ನೇಮಕ ಮಾಡುವಾಗ ಹರಿಜನ ಗಿರಿಜನ ಅಭ್ಯರ್ಥಿಗಳಿಗೆ ವಿಶೇಷ ಆದ್ಯತೆ.
5. ಸ್ಥಳೀಯ ಸಂಸ್ಥೆಗಳ ಆಯವ್ಯಯದಲ್ಲಿ ಪ್ರತಿಶತ 18 ರಷ್ಟು ಹಣವನ್ನು ಹರಿಜನ ಗಿರಿಜನರ ಕಲ್ಯಾಣ ಕಾರ್ಯಗಳಿಗೆ ಮೀಸಲಾಗಿರಿಸುವುದು.
6. ಸಾಮಾಜಿಕ ಅನ್ಯಾಯದಿಂದ ಹಾಗೂ ಜೀತ ಪದ್ಧತಿ ರೀತಿಯ ಶೋಷಣೆಯಿಂದ ಅವರನ್ನು ರಕ್ಷಿಸಲು ಶಾಸಕಾಂಗ ಹಾಗೂ ಕಾರ್ಯಾಂಗ ಕ್ರಮ ಅಸ್ಪೃಶ್ಯತೆ ನಿವಾರಣೆ ಕಾನೂನಿನ ಪರಿಣಾಮಕಾರಿ ಅನುಷ್ಠಾನಕ್ಕಾಗಿ ವಿಶೇಷ ಪೋಲಿಸ್ ಸಿಬ್ಬಂದಿ ವ್ಯವಸ್ಥೆ.
7. ಹರಿಜನ ಗಿರಿಜನರ ಕಲ್ಯಾಣಕ್ಕಾಗಿ ಐದನೆಯ ಪಂಚವಾರ್ಷಿಕ ಯೋಜನೆಯಲ್ಲಿ 26.50 ಕೋಟಿ ರೂ. ವೆಚ್ಚದ ಉಪ–ಕಾರ್ಯಕ್ರಮ.
8. ಸಮಗ್ರ ಗಿರಿಜನ ಅಭಿವೃದ್ಧಿ ಯೋಜನೆ–ಪ್ರಸ್ತುತ ವರ್ಷದಲ್ಲಿ 105 ಲಕ್ಷ ರೂಪಾಯಿ ಮಂಜೂರು.

**ಕರ್ನಾಟಕ ಸರಕಾರದ,**

**ವಾರ್ತಾ ಮತ್ತು ಪ್ರಚಾರ ಇಲಾಖೆಯಿಂದ ಪ್ರಕಟಿತ.**

ಶ್ರೀ ಸಿದ್ಧಲಿಂಗೇಶ್ವರ ಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಮಠ.